# ದೇವದುರ್ಗ ತಾಲೂಕಿನ ಹಗಲು ವೇಷಗಾರರು :

## ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

ಸಂಶೋಧಕ

**ಶ್ರೀ ನಲ್ಲಾರಡ್ಡಿ**

ಮಾರ್ಗದರ್ಶಕರು

**ಮೋಹನ್‌ಕೃಷ್ಣ ರೈ ಕೆ.**



ಚರಿತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೪

93

# ದೇವದುರ್ಗ ತಾಲೂಕಿನ ಹಗಲುವೇಷಗಾರರು:

## ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ

(ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)


ಸಂಶೋಧಕ

**ಶ್ರೀ ನಲ್ಲಾರಡ್ಡಿ**

ಮಾರ್ಗದರ್ಶಕರು

**ಮೋಹನ್‌ಕೃಷ್ಣ ರೈ ಕೆ.**





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬



೨೦೦೪




# ಮಾರ್ಗದರ್ಶಕರ ಪ್ರಮಾಣಪತ್ರ

'ದೇವದುರ್ಗ ತಾಲೂಕಿನ ಹಗಲುವೇಷಗಾರರು : ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ' ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ಶ್ರೀ ನಲ್ಲಾರಡ್ಡಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ :

(ಮೋಹನ್‌ಕೃಷ್ಣ ರೈ ಕೆ.)
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

# ಸಂಶೋಧಕನ ಪ್ರಮಾಣ ಪತ್ರ

'ದೇವದುರ್ಗ ತಾಲೂಕಿನ ಹಗಲುವೇಷಗಾರರು : ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ' ಎಂಬ ನಿಬಂಧವನ್ನು ಶ್ರೀ ಮೋಹನ್‌ಕೃಷ್ಣ ರೈ ಕೆ., ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೧೦-೫-೦೪

(ನಲ್ಲಾರಡ್ಡಿ)
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಕೃತಜ್ಞತೆಗಳು

"ದೇವದುರ್ಗ ತಾಲೂಕಿನ ಹಗಲುವೇಷಗಾರರು : ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ" ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಒಪ್ಪಿಸಲು ಅವಕಾಶ ಕಲ್ಪಿಸಿಕೊಟ್ಟ ಅಂದಿನ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಹಾಗೂ ಇಂದಿನ ಕುಲಪತಿಗಳು ಮತ್ತು ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುವೆ. ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತ ಸಲಹೆ, ಸಹಕಾರ ನೀಡಿದ ಮಾನ್ಯ ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡಬಿಚನಳ್ಳಿ ಹಾಗು ಚರಿತ್ರೆ ವಿಭಾಗದ ಅಂದಿನ ಮುಖ್ಯಸ್ಥರಾದ ಡಾ. ತಂಬಂಡ್ ವಿಜಯ್‌ಪೂಣಚ್ಚ ಹಾಗೂ ಈಗಿನ ಮುಖ್ಯಸ್ಥರಾದ ಡಾ. ಸಿ.ಆರ್. ಗೋವಿಂದರಾಜು ಅವರುಗಳಿಗೆ ಅನಂತ ಧನ್ಯವಾದಗಳನ್ನು ಸಲ್ಲಿಸುವುದು ಆದ್ಯ ಕರ್ತವ್ಯವೆಂದು ಭಾವಿಸುತ್ತೇನೆ.

ನನಗೆ ನಿಬಂಧದ ವಿಷಯ ಸೂಚಿಸಿ ಅಧ್ಯಯನದುದ್ದಕ್ಕೂ ತಾಳ್ಮೆಯ ಮಾರ್ಗದರ್ಶನ ನೀಡಿದ ಶ್ರೀ ಮೋಹನ್‌ಕೃಷ್ಣ ರೈ ಕೆ., ಅವರಿಗೆ ನನ್ನ ಮನಃಪೂರ್ವಕ ಧನ್ಯವಾದಗಳು. ಮತ್ತು ನನ್ನ ಅಧ್ಯಯನದ ಸಂದರ್ಭದಲ್ಲಿ ಸಲಹೆ ಸೂಚನೆಗಳನ್ನು ನೀಡಿದ ಪ್ರೊ. ಲಕ್ಷ್ಮಣ್ ತೆಲಗಾವಿ, ಡಾ. ಎನ್.ಚಿನ್ನಸ್ವಾಮಿ ಸೋಸಲೆ, ಡಾ. ವಿರೂಪಾಕ್ಷಿ ಪೂಜಾರಹಳ್ಳಿ, ಅಮರೇಶ ಬಲ್ಲಿದವ್ ಅವರುಗಳಿಗೆ ಅನಂತ ಕೃತಜ್ಞತೆ ಸಲ್ಲಿಸುವೆ.

ಅಧ್ಯಯನದ ಸಂದರ್ಭದಲ್ಲಿ ಹಲವು ಸೂಕ್ತ ಸಲಹೆಗಳನ್ನು ನೀಡಿದ ಡಾ. ಎಚ್.ಕೆ.ನಾಗೇಶ್, ಶ್ರೀ ಹರಿಶ್ಚಂದ್ರ ದಿಗ್ಸಂಗಿಕರ್, ಡಾ. ಕೆ.ಎಂ.ಮೈತ್ರಿ, ಡಾ. ಕೇಶವನ್ ಪ್ರಸಾದ್ ಕೆ., ಡಾ. ಚಲುವರಾಜು ಹಾಗೂ ಕ್ಷೇತ್ರಕಾರ್ಯದಲ್ಲಿ ಅಧ್ಯಯನಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಒದಗಿಸಿ ಕೊಟ್ಟ ಸಮಸ್ತ ಹಗಲುವೇಷಗಾರ ಮುಖಂಡರುಗಳಿಗೆ ನನ್ನ ಅನಂತ ಧನ್ಯವಾದಗಳು.

ಮಗನ ಓದಿನ ಏಳಿಗೆಯನ್ನು ಬಯಸುತ್ತಾ, ಅನೇಕ ಕನಸುಗಳನ್ನು ಕಟ್ಟಿಕೊಂಡ ನನ್ನ ಓದನ್ನೇ ಬಯಸುವ ನನ್ನ ಪೂಜ್ಯ ತಂದೆ-ತಾಯಿಯರಿಗೆ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ನನ್ನ ಓದಿನ ಬಗ್ಗೆ ಹರ್ಷ ವ್ಯಕ್ತಪಡಿಸುತ್ತಾ ಪ್ರೋತ್ಸಾಹ ನೀಡುವ ಸೋದರರಾದ ನಾಗರಾಜ, ಬೂದೆಪ್ಪ, ಹನುಮಂತ, ಯಲ್ಲಪ್ಪ, ಭಿಮಪ್ಪ, ಸೋದರಿಯರಿಗೆ ಹಾಗು ಮಾವಂದಿರುಗಳಿಗೆ ಅನಂತ ವಂದನೆಗಳು. ಪುಸ್ತಕ ಸೌಲಭ್ಯವನ್ನು ಒದಗಿಸಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಗ್ರಂಥಾಲಯಾಧಿಕಾರಿಗಳಾದ ಡಾ. ರಾಧಕೃಷ್ಣನ್,

ಹಾಗು ಸೋಮಶೇಖರ್, ಖಾದರ್ ಇನ್ನಿತರ ಸಿಬ್ಬಂದಿ ವರ್ಗದವರ ಸಹಕಾರವನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ. ಗಬ್ಬೂರಿನ ಗ್ರಂಥಪಾಲಕರಾದ ಶ್ರೀ ಬಸವರಾಜ ಕರಿಗಾರ ಇವರನ್ನು ಸ್ಮರಿಸಿಕೊಳ್ಳುತ್ತೇನೆ.

ಸ್ನೇಹಿತರಾಗಿ, ಹಿತೈಷಿಗಳಾಗಿ ಯಾವತ್ತು ನನ್ನ ಏಳ್ಗೆಯನ್ನು ಬಯಸುತ್ತಿರುವ ಎಸ್. ನರಸಪ್ಪ, ಕರಿಯಪ್ಪ, ದ್ಯಾವಪ್ಪ, ಟಿ. ಶಿವಪ್ಪ, ಟಿ. ಮಲ್ಲಪ್ಪ, ಮಲ್ಲಿಕಾರ್ಜುನ, ಡಾ. ರಾಜಶೇಖರ್, ಮರಿಲಿಂಗ ಕೊಳೂರು, ಚಿದಾನಂದ, ಬಿ.ಆರ್. ಅಂಚೆಸೂಗೂರು, ಯಲ್ಲಪ್ಪ, ಗುಂಡಣ್ಣ, ಅಮರೇಶ, ಶಿವಣ್ಣ ಗೋವಿಂದಪಲ್ಲಿ, ತಿಮ್ಮಣ್ಣ, ಅಂಜಿನಯ್ಯ ದೇವದುರ್ಗ, ಸದಾಶಿವ, ಮಲ್ಲಯ್ಯ ಮುಂಡರಗಿ, ರಾಮಣ್ಣ, ಭೀಮಣ್ಣ ಗಲಗ, ಬಸವರಾಜ ಗಬ್ಬೂರು, ಮುಕ್ರಾಮ್ ಬೇಗ, ಬಹಾದ್ದೂರ್‌ಬೇಗ್, ಬಸವರಾಜ ಕರಿಗಾರ, ರಾಮಣ್ಣಶಾಸಂ, ಗಂಗಪ್ಪ ಸಿಂಗ್ರಿ, ರಾಮಣ್ಣ ಗಣೆಕಲ್, ಬಸವಲಿಂಗ, ಬಸವರಾಜ, ವಿರೂಪಾಕ್ಷಿ, ಶಿವರಾಜ ಭೃಂಗಿ, ಶಿವಲಿಂಗಪ್ಪ ಭೃಂಗಿ, ಜಿ. ವೆಂಕಟರಾಮನ್, ಶಿವಪ್ಪ ನೆಲಹಾಳ್, ರೇಣುಕಾ, ಸಂತೋಷ, ಭಾಸ್ಕರ್‌ಶೆಟ್ಟಿ, ಶ್ರೀನಿವಾಸ ಶೆಟ್ಟಿ, ಭದ್ರೇಶ್, ಗಂಗಾಧರ, ಶರಣಪ್ಪ, ಅರುಣ್ ಜೋಳದ ಕೂಡ್ಲಿಗಿ, ಜಗದೀಶಕುಮಾರ್, ಬೆಂಕ್ಯಾನಾಯ್ಕ, ವಿಜಯಲಕ್ಷ್ಮಿ, ಶ್ರೀ ಸೂಗರೇಶ ಪೋಲಿಸ್‌ಪಾಟೀಲ, ಶ್ರೀ ಸದಾಶಿವಯ್ಯ ಸ್ವಾಮಿ, ಮಹಿಬೂಬ, ಯಲ್ಲಪ್ಪ, ಭೀಮಪ್ಪ, ಹನುಮಂತ, ಅಂಜಿನಯ್ಯ, ಸಂಗಪ್ಪ, ಮುದ್ದಪ್ಪ, ಮರಿಲಿಂಗ, ಹುಚ್ಚರೆಡ್ಡಿ, ಬೂದೆಪ್ಪ ತಳವಾರ್, ದೇವರಾಜ, ಸಿದ್ದಣ್ಣ, ತಿಪ್ಪೇಸ್ವಾಮಿ, ಜ್ಯೋತ್ಸ್ನಾ, ಗೀತಾ, ಅಜ್ಜಯ್ಯ, ನಿಶಾರ್, ಹನುಮೇಶ ಹಾಗೂ ನನ್ನ ಅಧ್ಯಯನಕ್ಕೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರೇರಣೆ ನೀಡಿದ ಎಲ್ಲ ಗೆಳೆಯರಿಗೂ ಹಿತೈಷಿಗಳಿಗೂ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಚರಿತ್ರೆ ವಿಭಾಗದ ಬೋಧಕೇತರ ಸಿಬ್ಬಂದಿಯವರಾದ ಶ್ರೀ ಗಾದಿಲಿಂಗಪ್ಪ, ಗಂಗಾಧರ್ ಇವರನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳುತ್ತೇನೆ. ಅಕ್ಕರೆಯಿಂದ ಅಕ್ಷರ ಸಂಯೋಜಿಸಿಕೊಟ್ಟ ಶ್ರೀಮತಿ ಎ. ನಾಗವೇಣಿಯವರಿಗೆ ಕೃತಜ್ಞತೆಗಳು.

ನಲ್ಲಾರಡ್ಡಿ

# ದೇವದುರ್ಗ ತಾಲೂಕಿನ ಹಗಲುವೇಷಗಾರರು:

## ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ

### ಪರಿವಿಡಿ

ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ದೇಶದ ಚರಿತ್ರೆ ಎಂದರೆ ಅದು ಆ ದೇಶದ ಜನರ ಚರಿತ್ರೆ. ಇಲ್ಲಿ ಜನರು ಎಂದಾಗ ಹಲವಾರು ಸಮಸ್ಯೆಗಳು ಕಾಣಿಸಿಕೊಳ್ಳುತ್ತವೆ. ಉದಾ: ಜನರು ಎಂದರೆ ಯಾರು, ಆಳ್ವಿಕೆ ನಡೆಸಿದವರೊ ಅಥವಾ ಆಳ್ವಿಕೆಗೆ ಒಳಪಟ್ಟವರೊ ಎಂಬಿತ್ಯಾದಿ. ಪ್ರಸಿದ್ಧ ಚರಿತ್ರೆಕಾರ ಡಿ.ಡಿ. ಕೊಸಾಂಬಿಯವರ ಪ್ರಕಾರ ಜನರು ಎಂದರೆ ರಾಜಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವಗಳೆರಡರ ಹಿಡಿತಕ್ಕೆ ಒಳಪಟ್ಟಂತಹ ವರ್ಗ. ಪ್ರಭುತ್ವ ಜನತೆಯನ್ನು ಅವಲಂಬಿಸಿಕೊಂಡಿರುತ್ತದೆ. ಆದರೆ ಜನತೆಯನ್ನು ದೂರವಿಟ್ಟಿರುತ್ತದೆ. ಚರಿತ್ರೆಯಲ್ಲಿ ರಾಜಮಹಾರಾಜರ ವೈಭವದ ಜೀವನ ದಾಖಲಾಯಿತೇ ವಿನಃ ಜನತೆಯ ನೋವಿನ ಚರಿತ್ರೆಯಲ್ಲ. ಶ್ರೇಣೆಕೃತ ಸಮಾಜ ವ್ಯವಸ್ಥೆಯಲ್ಲಿ ವಿವಿಧ ಸ್ತರಗಳು, ಅವುಗಳ ಸಾಮಾಜಿಕ ಸ್ಥಾನಮಾನ ಹಾಗೂ ಆರ್ಥಿಕ ಮಟ್ಟದ ಮೇಲೆ ನಿರ್ಧಾರವಾಗುತ್ತಿದ್ದವು. ಸಾಮಾಜಿಕ ಸ್ಥಾನಮಾನವನ್ನು ನಿರ್ಧರಿಸುವ ಹಕ್ಕು ಮೇಲ್‌ವರ್ಗದವರದಾಗಿತ್ತು. ಬುಡಕಟ್ಟು, ಆದಿವಾಸಿ, ಸಮುದಾಯಗಳೆಲ್ಲವೂ ಸಮಾಜದಲ್ಲಿ ನೆಲೆ ನಿಲ್ಲಲು ಯಾವುದೇ ಸ್ತರಗಳಿಲ್ಲದೆ ಸಂಪೂರ್ಣವಾಗಿ ಅಲಕ್ಷ್ಯಕ್ಕೆ ಒಳಗಾದವರು. ಇಂತಹ ಸಮುದಾಯಗಳಲ್ಲಿ ಹಗಲುವೇಷಗಾರರ ಸಮುದಾಯವು ಒಂದು. ಸಮಾಜದಲ್ಲಿ ತಮ್ಮದೆ ಆದ ಚೌಕಟ್ಟಿನಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದುಕನ್ನು ರೂಪಿಸಿಕೊಂಡು ಒಟ್ಟಾರೆ ಜೀವನ ಮಟ್ಟದಲ್ಲಿ ಅತ್ಯಂತ ಕೆಳ ಹಂತ ತಲುಪಿದವು. ಆರ್ಥಿಕ ಹಿಂದುಳಿದಿರುವಿಕೆ ಹಾಗೂ ಅಧಿಕಾರ ಮತ್ತು ಸವಲತ್ತುಗಳಿಂದ ವಂಚಿತರಾದದ್ದು ಇದಕ್ಕೆ ಕಾರಣ. ಸ್ವಂತದ್ದು ಎನ್ನುವ ಒಂದು ತುಂಡು ಆಸ್ತಿ ಇಲ್ಲದೆ ಜೀವನ ನಿರ್ವಹಣೆಗೆ ತಮ್ಮ ವೇಷಗಾರಿಕಾ ವೃತ್ತಿಯನ್ನೆ ಅವಲಂಬಿಸುವ ಒತ್ತಾಯಕ್ಕೆ ಈ ಸಮುದಾಯ ಒಳಗಾಯಿತು. ರಾಜಪ್ರಭುತ್ವದ ಸಂದರ್ಭದಲ್ಲಿ ಮೂಲೆಗೊತ್ತಲ್ಪಟ್ಟ ಈ ಸಮುದಾಯ ಪ್ರಜಾಪ್ರಭುತ್ವದ ಸಂದರ್ಭದಲ್ಲೂ ಮುಖ್ಯವಾಹಿನಿಗೆ ಸೇರಿಕೊಳ್ಳಲಿಲ್ಲ. ರಾಜಕೀಯ ರಚನೆಯಲ್ಲಿ ಬದಲಾವಣೆಯಾದರೂ ಶ್ರೇಣೆಕೃತ ಸಮಾಜ ವ್ಯವಸ್ಥೆಯಲ್ಲಿ ಅಂದಿನಿಂದ ಇಂದಿನವರೆಗೂ ಬದಲಾವಣೆಗಳು ಆಗಲಿಲ್ಲ. ಕೃಷಿ ಅರ್ಥವ್ಯವಸ್ಥೆ, ಕೈಗಾರಿಕಾ ಅರ್ಥ ವ್ಯವಸ್ಥೆ, ನಗರ ಅರ್ಥವ್ಯವಸ್ಥೆ, ಜ್ಞಾನ ಕೇಂದ್ರಿತ ವ್ಯವಸ್ಥೆಗಳಾವುದರಲ್ಲೂ ಹೊಂದಿಕೊಳ್ಳಲಾಗದೆ ಸಂದಿಗ್ಧ ಪರಿಸ್ಥಿತಿಯಲ್ಲಿ ಜೀವನ ನಡೆಸುವ ಅನಿವಾರ್ಯತೆ ಈ ಜನಾಂಗದ ಚರಿತ್ರೆಯುದ್ದಕ್ಕೂ ಕಂಡು ಬರುತ್ತದೆ. ವೇಷಗಾರಿಕೆಯನ್ನು ಪ್ರಧಾನ ವೃತ್ತಿಯನ್ನಾಗಿ ನಂಬಿಕೊಂಡ ಈ ಸಮುದಾಯ ಬಣ್ಣ ಹಚ್ಚುವುದು, ಹಾಡು, ಕುಣಿತ ಹಾಗು ಸಂಭಾಷಣೆ ಮುಂತಾದವುಗಳ ಮೂಲಕ ತಮ್ಮದೆ ಆದ ವ್ಯವಸ್ಥೆಯೊಂದನ್ನು ರೂಪಿಸಿಕೊಂಡು

ಆ ನಿಟ್ಟಿನಲ್ಲಿ ತನ್ನತನವನ್ನು ಉಳಿಸಿಕೊಂಡಿದೆ. ಹೆಚ್ಚಿನ ಅಲಕ್ಷಿತ ಸಮುದಾಯಗಳೆಲ್ಲವೂ ಈ ಮೂಲಕವೇ ತಮ್ಮ ಅಸ್ತಿತ್ವವನ್ನು ಉಳಿಸಿ ಮುಂದುವರೆಸಿಕೊಂಡು ಬಂದಿವೆ. ಯಜಮಾನಿಕೆಯ ದಬ್ಬಾಳಿಕೆಗೆ ಒಳಗಾಗಿ ಸಮಾಜದಿಂದ ದೂರಕ್ಕೆ ಒತ್ತಲ್ಪಟ್ಟರೂ ಹಗಲುವೇಷಗಾರರು ತಮ್ಮದೆ ಆದ ಚೌಕಟ್ಟಿನಲ್ಲಿ ಜೀವನ ವಿಧಾನವೊಂದನ್ನು ರೂಪಿಸಿಕೊಂಡರು.

ಮೇಲುವರ್ಗಗಳಿಗೆ ಈ ಸಮುದಾಯ ಅಲಕ್ಷಿತವಾಗಿ ಕಂಡುಬಂದರೂ, ಹಗಲುವೇಷಗಾರರು ಅವರಿಗೆ ಅವರೆ ಅಲಕ್ಷಿತರಾಗಿ ಕಂಡು ಬಂದಿಲ್ಲ. ಈ ಸೂಕ್ಷ್ಮವನ್ನು 'ಸಬಾಲ್ಟರ್ನ್' ಅಧ್ಯಯನಕಾರರು ಗುರುತಿಸಿಕೊಂಡು ಈ ರೀತಿಯ ಸಮುದಾಯಗಳೂ ಚರಿತ್ರೆಯಲ್ಲಿ ಪ್ರವೇಶ ಪಡೆಯುವಂತೆ ಮಾಡಿದರು. ಹೀಗಾಗಿ ಅಲಕ್ಷಿತ ಸಮುದಾಯಗಳೂ ಚರಿತ್ರೆಯಲ್ಲಿ ನಮಗೂ ಸ್ಥಾನ ಕೊಡಿ ಎಂದು ಕೇಳುವ ಧೈರ್ಯವನ್ನು ತಂದುಕೊಂಡವು. ಅಲಕ್ಷಿತ ಸಮುದಾಯಗಳೂ ಪ್ರತಿರೋಧದ ಧ್ವನಿಗಳ ಮೂಲಕ ತಮ್ಮ ಇರುವಿಕೆಯನ್ನು ಸ್ಥಾಪಿಸಿಕೊಂಡಾಗ ಮಾತ್ರ ಅವು ಸಬಾಲ್ಟರ್ನ್ ಅಧ್ಯಯನದ ಚೌಕಟ್ಟಿನಲ್ಲಿ ಬಹುಬೇಗ ಸೇರ್ಪಡೆಗೊಳ್ಳುತ್ತವೆ. ಸಮುದಾಯಗಳ ಅಧ್ಯಯನವಷ್ಟೆ ಸಬಾಲ್ಟರ್ನ್ ಅಧ್ಯಯನವಾಗುವುದಿಲ್ಲ. ಆ ಸಮುದಾಯಗಳು ತಮ್ಮ ಜೀವನ ನಿರ್ವಹಣೆಗಾಗಿ ಕಂಡುಕೊಂಡ ಮಾರ್ಗೋಪಾಯಗಳು, ನಡೆಸಿದ ಸಂಘರ್ಷ, ಅನುಭವಿಸಿದ ಶೋಷಣೆ, ಮುಂತಾದವು ಸಬಾಲ್ಟರ್ನ್ ಅಧ್ಯಯನದ ಪ್ರಮುಖ ವಸ್ತುಗಳಾಗುತ್ತವೆ.

ಪ್ರಬಲ ವರ್ಗಗಳು ಕೆಳವರ್ಗಗಳನ್ನು ಶೋಷಣೆ ಮಾಡುವುದರ ಬಗೆಗಳನ್ನು ಇಟಲಿಯ ಮಾರ್ಕಿಸ್ಟನಾದ ಆ್ಯಂಟೋನಿ ಗ್ರಾಂಸಿಯು 'ಹೆಜಮನಿ' ಎನ್ನುವ ಪರಿಕಲ್ಪನೆಯ ಮೂಲಕ ವಿವರಿಸಿದ್ದಾನೆ.[೨] ಕೆಳವರ್ಗಗಳನ್ನು ಆತ ಸಬಾಲ್ಟರ್ನ್ ಎಂದು ಗುರುತಿಸಿದ್ದಾನೆ. ಅಧಿಕಾರದಿಂದ ಅಥವಾ ಯಜಮಾನಿಕೆಯಿಂದ ದೂರತಳ್ಳಲ್ಪಟ್ಟ ಆದಿವಾಸಿ, ಬುಡಕಟ್ಟು, ರೈತ, ಕಾರ್ಮಿಕ, ಮತ್ತಿತರ ಗುಂಪುಗಳು ಅಲಕ್ಷಿತ ವರ್ಗದಲ್ಲಿ ಬರುತ್ತವೆ. ಗ್ರಾಂಸಿಯು ಈ ವರ್ಗಗಳ ಚರಿತ್ರೆ ರಚನೆಗೆ ಪ್ರಾಮುಖ್ಯತೆ ನೀಡಿದನು. ಅಲ್ಲಿಂದ ಈ ರೀತಿಯ ಚರಿತ್ರೆ ಬರವಣಿಗೆ ಹೆಚ್ಚಿನ ಮಹತ್ವವನ್ನು ಕಂಡುಕೊಂಡಿತು. ರಣಜಿತ್ ಗುಹಾ, ಡೇವಿಡ್ ಹಾರ್ಡಿಮನ್, ಗ್ಯಾನ್‌ಪಾಂಡೆ, ಡೇವಿಡ್ ಆರ್ನಾಲ್ಡ್, ಸುಮಿತ್ ಸರ್ಕಾರ್, ದೀಪೇಶ್ ಚಕ್ರವರ್ತಿ ಮೊದಲಾದವರು ಈ ಹಿನ್ನೆಲೆಯಲ್ಲಿಯೇ ತಮ್ಮ ವಾದವನ್ನು ಮಂಡಿಸಿದರು.

ಕರ್ನಾಟಕದ ಚರಿತ್ರೆ ಬರವಣಿಗೆಯು ಹೆಚ್ಚು ಕಡಿಮೆ ರಾಷ್ಟ್ರೀಯವಾದಿ ಮತ್ತು ಸಾಮ್ರಾಜ್ಯಶಾಹಿ ಪಂಥಗಳ ವಾದ-ಪ್ರತಿವಾದಗಳಿಗೆ ಸೀಮಿತವಾಗಿದ್ದು, ವೈಭವೀಕೃತ, ರಾಜಕೀಯ ಕೇಂದ್ರೀಕೃತ, ಜಾತಿ ಪ್ರಧಾನ ಬರವಣಿಗೆಗಳಿಗಷ್ಟೆ ಸೀಮಿತಗೊಂಡಿದೆ. ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಹಿನ್ನೆಲೆಯ ಬರವಣಿಗೆಗಳು ಅಲ್ಲೊಂದು ಇಲ್ಲೊಂದು ಕಂಡುಬರುತ್ತವೆ. ಹಗಲುವೇಷಗಾರರ ಬದುಕನ್ನು ಅರ್ಥೈಸಿಕೊಳ್ಳಬೇಕಾದರೆ ಸಬಾಲ್ಟರ್ನ್ ಅಧ್ಯಯನ ವಿಧಾನವನ್ನು ಅನುಸರಿಸಲೇಬೇಕಾಗುತ್ತದೆ. ಹಗಲುವೇಷಗಾರರನ್ನು ಕುರಿತು ಕೆಲವೊಂದು ಅಧ್ಯಯನಗಳು ನಡೆದಿವೆ. ಅವು ಈ ಅಲೆಮಾರಿ

ಸಮುದಾಯದ ಮೂಲ ಮತ್ತು ವಲಸೆಯನ್ನು ಸ್ಥೂಲವಾಗಿ ಪರಿಚಯಿಸುತ್ತವೆ. ಎಡ್ಗರ್‌ಥರ್ಸ್ಟನ್‌ರ 'ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ', ಕೆ.ಎಸ್. ಸಿಂಗ್‌ರವರ 'ದಿ ಸೆಡ್ಯೂಲ್ಡ್ ಕ್ಯಾಸ್ಟ್ಸ್',[೩] ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತ ಕೃಷ್ಣಅಯ್ಯರ್‌ರವರ 'ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ಸ್',[೪] ಯಳನಾಡು ಅಂಜನಪ್ಪನವರ 'ಹಗಲುವೇಷದವರ ಸಂಸ್ಕೃತಿ',[೫] ಕೆ.ಎಂ. ಮೈತ್ರಿಯವರ 'ಕ್ಯಾಸ್ಟ್ ಸರ್ಟಿಫಿಕೆಟ್ ಪ್ರಾಬ್ಲಮ್ ಆಫ್ ಬುಡುಗ ಜಂಗಮ',[೬] ಗಂಗಾಧರ ದೈವಜ್ಞರ 'ಬುಡುಗ ಜಂಗಾಲರು',[೭] ಬಿ.ಎಂ. ಹೊಸಮನಿಯವರ 'ಕರ್ನಾಟಕದ ಹಗಲುವೇಷಗಾರರು',[೮] ಹಾಗೂ ವೆಂಕನಗೌಡರ 'ಬಳ್ಳಾರಿ-ಆಂಧ್ರ ಗಡಿಭಾಗದ ಹಗಲುವೇಷಗಾರರು',[೯] ಇವು ಈ ನಿಟ್ಟಿನಲ್ಲಿ ಹೆಸರಿಸಬಹುದಾದ ಕೆಲವು ಪ್ರಯತ್ನಗಳು. ಮೇಲೆ ವಿವರಿಸಿದ ಕೃತಿಗಳ ಜೊತೆಗೆ ಇನ್ನು ಹಲವಾರು ಆಕರಗಳನ್ನು ಪ್ರಸ್ತುತ ಅಧ್ಯಯನಕ್ಕೆ ಉಪಯೋಗಿಸಿಕೊಳ್ಳಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಬಹುಮುಖ್ಯವಾದ ಆಕರವೆಂದರೆ ಮೌಖಿಕ ಆಕರಗಳು. ನೇರ ಸಂದರ್ಶನದ ಮೂಲಕ ಈ ಸಮುದಾಯಕ್ಕೆ ಸಂಬಂಧಪಟ್ಟ ಹಲವಾರು ರೀತಿಯ ಮಾಹಿತಿಗಳನ್ನು ಸಂಗ್ರಹಿಸಿಕೊಳ್ಳಲಾಗಿದೆ. ದೇವದುರ್ಗ ತಾಲೂಕಿನಾದ್ಯಂತ ಕ್ಷೇತ್ರಕಾರ್ಯ ನಡೆಸಿ ಈ ಸಮುದಾಯದ ಕುರಿತು ಸಾಧ್ಯವಾದಷ್ಟು ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅವುಗಳನ್ನು ಸಬಾಲ್ಟರ್ನ್ ಅಧ್ಯಯನದ ಶಿಸ್ತಿನ ಚೌಕಟ್ಟಿನೊಳಗೆ ತರುವ ಪ್ರಯತ್ನವನ್ನು ಮಾಡಲಾಗಿದೆ. ಈ ಕಾರಣಕ್ಕಾಗಿಯೇ ಪ್ರಸ್ತುತ ಅಧ್ಯಯನದ ಶೀರ್ಷಿಕೆಯನ್ನು "ದೇವದುರ್ಗ ತಾಲೂಕಿನ ಹಗಲುವೇಷಗಾರರು: ಸಬಾಲ್ಟರ್ನ್ ಅಧ್ಯಯನದ ಹಿನ್ನೆಲೆಯಲ್ಲಿ" ಎಂಬುದಾಗಿ ಇಟ್ಟುಕೊಳ್ಳಲಾಗಿದೆ.

## ಉದ್ದೇಶ

ಅಲೆಮಾರಿ ಸಮುದಾಯಕ್ಕೆ ಸೇರಿದ ಹಗಲುವೇಷಗಾರರು ಚರಿತ್ರೆಯುದ್ದಕ್ಕೂ ಶೋಷಣೆಗೆ ಒಳಪಟ್ಟು, ನಿರ್ದಿಷ್ಟ ಬಗೆಯ ಬದುಕನ್ನು ಕಾಣದೆ ಸಮಾಜದಿಂದ ಮತ್ತು ಚರಿತ್ರೆಯಿಂದ ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೆ ಒಳಗಾದವರು. ಈ ಸಮುದಾಯ ಅತ್ತ ನಾಗರಿಕತೆಗೂ ಹೊಂದಿಕೊಳ್ಳದೆ, ಇತ್ತ ಕಾಡಿಗೂ ಹೊಂದಿಕೊಳ್ಳದೆ, ಅತ್ಯಂತ ಹಿನಾಯಸ್ಥಿತಿಯಲ್ಲಿ ಬದುಕು ಸಾಗಿಸುವ ಒತ್ತಾಯಕ್ಕೆ ಒಳಗಾದವರು. ಜಾತಿ ಆಧಾರಿತ ಶ್ರೇಣಿಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಹಗಲುವೇಷಗಾರರದಂತೂ ತೀರಾ ಕೆಳಸ್ತರದ ಹಂತ. ವೈದಿಕ ವರ್ಗದಿಂದ ಧಾರ್ಮಿಕ ದಾಸ್ಯಕ್ಕೆ ಹಾಗೂ ವೈದಿಕೇತರ ಮೇಲು ವರ್ಗದ ಜನರ ದಬ್ಬಾಳಿಕೆಗೆ ಒಳಗಾಗಿ ತಮ್ಮತನವನ್ನು ಉಳಿಸಿಕೊಳ್ಳುವಲ್ಲಿ ಹಾಗೂ ಚರಿತ್ರೆಯಲ್ಲಿ ನಿರ್ದಿಷ್ಟ ಸ್ಥಾನವನ್ನು ಪಡೆದುಕೊಳ್ಳುವಲ್ಲಿ ಈ ಸಮುದಾಯ ವಿಫಲವಾಯಿತು, ಇದರರ್ಥ ಹಗಲುವೇಷಗಾರರು ತಮ್ಮದೆ ಆದ ಸಾಂಸ್ಕೃತಿಕ ಬದುಕೊಂದನ್ನು ಹೊಂದಿಲ್ಲ ಎಂದಲ್ಲ. ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಹಗಲು ವೇಷಗಾರರು ನೆಲೆಸಿರುವುದು ಕಂಡು ಬರುತ್ತದೆ. ಪ್ರಾದೇಶಿಕನುಗುಣವಾಗಿ ಇವರನ್ನು ಬಹುರೂಪಿಗಳು, ಜಾತಿಗಾರರು, ಬಿಂಗೇರರು, ವೇಷಗಾರರು ಎಂದು ಕರೆಯುತ್ತಾರೆ. ಈ ಸಮುದಾಯ ವಿಶಿಷ್ಟವಾದ ಬದುಕೊಂದನ್ನು ಸಾಗಿಸುತ್ತದೆಯಾದರೂ ಚರಿತ್ರೆ ಅಧ್ಯಯನದಲ್ಲಿ ಸಂಪೂರ್ಣ ನಿರ್ಲಕ್ಷ್ಯಕ್ಕೆ ಒಳಪಟ್ಟಿದೆ.

ಅಲೆಮಾರಿ ಸಮುದಾಯಗಳ ಬಗ್ಗೆ ಹಲವಾರು ಅಧ್ಯನಯಗಳು ನಡೆದಿದ್ದರೂ, ದೇವದುರ್ಗದ ಹಗಲುವೇಷಗಾರರ ಬಗ್ಗೆ ಅಧಿಕೃತ ಅಧ್ಯಯನಗಳು ನಡೆದಿಲ್ಲ. ಪ್ರಸ್ತುತ ಅಧ್ಯಯನವು ದೇವದುರ್ಗ ತಾಲೂಕಿನ ಹಗಲುವೇಷಗಾರರ ಬದುಕಿನ ವಿವಿಧ ಮುಖಗಳನ್ನು ಪತ್ತೆ ಹಚ್ಚುವ ಪ್ರಯತ್ನವಾಗಿದೆ. ಈ ಅಧ್ಯಯನದಲ್ಲಿ ಸಬಾಲ್ಟರ್ನ್ ಅಧ್ಯಯನ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಹಗಲುವೇಷಗಾರರು, ಸಮಾಜದಲ್ಲಿ ಯಾವ ಸ್ತರವನ್ನು ಹೊಂದಿರದ ಅಲಕ್ಷಿತವರ್ಗಕ್ಕೆ ಸೇರಿದವರು. ಸಬಾಲ್ಟರ್ನ್ ಪಂಥವು ಈ ಸ್ವರೂಪದ ಸಮುದಾಯಗಳ ಕುರಿತು ಚರ್ಚೆ ನಡೆಸುತ್ತಾ ಬಂದಿದೆ. ಈ ಅಧ್ಯಯನದಲ್ಲಿ ಮುಖ್ಯವಾಗಿ ಹಗಲುವೇಷಗಾರರ ಬದುಕಿನ ಎರಡು ಮುಖ್ಯ ಪ್ರಶ್ನೆಗಳನ್ನು ಎತ್ತಿಕೊಳ್ಳಲಾಗಿದೆ. ಅವುಗಳೆಂದರೆ, ಹಗಲುವೇಷಗಾರರ ಸಾಮಾಜಿಕ ಸ್ಥಿತಿಗತಿ ಹಾಗೂ ಅವರ ಆರ್ಥಿಕ ಬದುಕು. ಪ್ರಸ್ತುತ ಅಧ್ಯಯನದಲ್ಲಿ ಒಟ್ಟು ಐದು ಅಧ್ಯಾಯಗಳಿವೆ. ಅಧ್ಯಾಯ ಎರಡರಲ್ಲಿ ಹಗಲುವೇಷಗಾರರ ಮೂಲ ಮತ್ತು ವಲಸೆಯ ಕುರಿತು ಚರ್ಚೆ ನಡೆಸಲಾಗಿದೆ. ಈ ಜನಾಂಗವು ಮೂಲತಃ ಅಲೆಮಾರಿ ಜನಾಂಗವಾಗಿದ್ದು ಪ್ರದೇಶದಿಂದ ಪ್ರದೇಶಕ್ಕೆ ಜೀವನ ನಿರ್ವಹಣೆಗಾಗಿ ಸಂಚರಿಸುತ್ತಾ ಯಾವುದೇ ನಿರ್ದಿಷ್ಟ ಬಗೆಯ ಬದುಕನ್ನು ಕಾಣದೆ ಸಮಾಜದಿಂದ ಬೇರ್ಪಟ್ಟ ರೀತಿಯಲ್ಲಿ ಇರುವಂತದ್ದು. ಹಗಲುವೇಷಗಾರರ ಮೂಲದ ಬಗೆಗಿನ ವಿವರಣೆ ಕುತೂಹಲಕಾರಿಯಾಗಿದ್ದು ಅದರ ಸಂಕ್ಷಿಪ್ತ ಅಧ್ಯಯನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ಈ ಜನಾಂಗವು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶದಲ್ಲಿ ನೆಲೆ ನಿಂತಾಗ ಆ ಜನಾಂಗದೊಳಗೆ ಆಗುವ ಆಂತರಿಕ ಬದಲಾವಣೆಗಳು, ಸ್ಥಳೀಯ ಸಮಾಜದೊಂದಿಗಿನ ಮುಖಾಮುಖಿ ಈ ಅಧ್ಯಾಯದ ಪ್ರಮುಖ ವಸ್ತು. ಅಧ್ಯಾಯ ಮೂರರಲ್ಲಿ ಹಗಲುವೇಷಗಾರರ ಸಾಮಾಜಿಕ ಸ್ಥಿತಿಗತಿಯ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಈ ಸಮುದಾಯದ ಕುಟುಂಬ ವ್ಯವಸ್ಥೆ, ದೇವತಾರಾಧನೆ, ಆಹಾರ ವ್ಯವಸ್ಥೆ, ವಸತಿ, ಉಡುಗೆ-ತೊಡುಗೆಗಳು, ಜನನ, ಮರಣ, ವಿವಾಹ, ನ್ಯಾಯಾಂಗ ವ್ಯವಸ್ಥೆ, ವೃತ್ತಿಗಳು ಮೊದಲಾದ ಅಂಶಗಳನ್ನು ಚರ್ಚೆಗೆ ಒಡ್ಡಲಾಗಿದೆ. ಯಜಮಾನಿಕೆಯ ದಬ್ಬಾಳಿಕೆ ಹಗಲುವೇಷಗಾರರ ಬದುಕಿನ ಪ್ರತಿಯೊಂದು ಸಂದರ್ಭದಲ್ಲೂ ಕಂಡು ಬರುವ ಸಾಮಾನ್ಯ ಲಕ್ಷಣ. ಈ ಜನಾಂಗವು ಸ್ವತಂತ್ರವಾಗಿ ಜೀವಿಸುತ್ತಿದೆ ಎಂದರೆ ಅದು ಸತ್ಯಕ್ಕೆ ದೂರವಾದ ಮಾತು, ಯಾವುದೇ ಸ್ವತಂತ್ರ ನಿರ್ಣಯಗಳನ್ನು ತೆಗೆದುಕೊಳ್ಳಲಾರದೆ, ಶ್ರೀಮಂತ ಸಂಸ್ಕೃತಿಯನ್ನು ಹೊಂದಿದ್ದರೂ ಅದನ್ನು ಅಧಿಕೃತಗೊಳಿಸಲಾಗದೆ ಹಂಗಿನ ಬದುಕಿಗೆ ಮೊರೆ ಹೋಗುವ ಅನಿವಾರ್ಯತೆ ಇವರದು.

ಅಧ್ಯಾಯ ನಾಲ್ಕು ಹಗಲುವೇಷಗಾರರ ಆರ್ಥಿಕ ಬದುಕಿನ ವಿವಿಧ ಆಯಾಮಗಳನ್ನು ಪರಿಚಯಿಸುವತ್ತ ಸಾಗುತ್ತದೆ. ಈ ದೇಶದ ಎರಡು ಪ್ರಮುಖ ಅರ್ಥವ್ಯವಸ್ಥೆಗಳಾದ ಕೃಷಿ ಮತ್ತು ಕೈಗಾರಿಕೆಗಳೆರಡರಲ್ಲೂ ಈ ಸಮುದಾಯ ನಿರ್ದಿಷ್ಟ ಸ್ಥಾನವನ್ನು ಪಡೆದುಕೊಂಡಿಲ್ಲ. ಹಾಗಿದ್ದರೂ ಅದು ನಿರ್ದಿಷ್ಟ ಬಗೆಯ ಆರ್ಥಿಕ ಬದುಕೊಂದನ್ನು ರೂಪಿಸಿಕೊಂಡಿದೆ. ವಂಶಪಾರಂಪರ್ಯವಾಗಿ ಬಂದ ವೇಷಗಾರಿಕೆಯನ್ನು ಪ್ರಮುಖ ವೃತ್ತಿಯನ್ನಾಗಿಸಿಕೊಂಡು ಅದರಲ್ಲೇ ತಮ್ಮ ಜೀವನ ನಿರ್ವಹಣೆಯ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಂಡು ಬಂದಿದ್ದಾರೆ. ವೇಷಗಾರಿಕೆ, ಭಿಕ್ಷಾಟನೆ, ಬೇಟೆ, ಪಶುಪಾಲನೆ, ಗೃಹ ಕೈಗಾರಿಕೆ, ವ್ಯಾಪಾರ,

ಕೂಲಿ ಮೊದಲಾದ ಆರ್ಥಿಕ ಬದುಕಿಗೆ ಸಂಬಂಧಿಸಿದ ವಿಚಾರಗಳನ್ನು ಇಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಒಟ್ಟಾರೆಯಾಗಿ ಈ ಅಧ್ಯಾಯದಲ್ಲಿ ಕಂಡುಕೊಂಡ ವಿಚಾರಗಳನ್ನು ಮಂಡಿಸಲಾಗಿದೆ. ಹಗಲುವೇಷಗಾರರ ಬದುಕಿನ ಕುರಿತು ಯಾವುದೇ ತೀರ್ಮಾನಗಳನ್ನು ಕೊಡುವ ಇಲ್ಲವೆ ಬದಲಿ ಮಾರ್ಗೋಪಾಯಗಳನ್ನು ಸೂಚಿಸುವ ಕೆಲಸವನ್ನು ಪ್ರಸ್ತುತ ಅಧ್ಯಯನವು ಮಾಡಿಲ್ಲ. ಬದಲಾಗಿ ಈ ಜನಾಂಗದ ಚರಿತ್ರೆಯು 'ಜನರ ಚರಿತ್ರೆ' ನಿರ್ಮಾಣ ಸಂದರ್ಭದಲ್ಲಿ ಎಷ್ಟು ಪ್ರಮುಖವಾದದ್ದು ಎನ್ನುವುದನ್ನು ತೋರಿಸಿಕೊಡುವುದಾಗಿದೆ. ಅರಸಕೇಂದ್ರಿತ ಚರಿತ್ರೆ ಬರವಣಿಗೆಯಲ್ಲಿ ಈ ರೀತಿಯ ಸಮುದಾಯಗಳು ದಾಖಲುಗೊಳ್ಳುವುದಿಲ್ಲ. ಚರಿತ್ರೆಯನ್ನು ಜನರ ಚರಿತ್ರೆಯನ್ನಾಗಿ ರೂಪಿಸಿಕೊಂಡಾಗ ಮಾತ್ರ ಈ ರೀತಿಯ ಅಧ್ಯಯನಗಳು ಬೆಳಕಿಗೆ ಬರಲು ಸಾಧ್ಯ. ಪ್ರಸ್ತುತ ಅಧ್ಯಯನದ ಉದ್ದೇಶವೂ ಇದೇ ಆಗಿದೆ.

### ವ್ಯಾಪ್ತಿ

ಹಗಲುವೇಷಗಾರರು ಕರ್ನಾಟಕದ ರಾಯಚೂರು, ಬಳ್ಳಾರಿ, ಬೆಳಗಾವಿ, ಗುಲಬರ್ಗಾ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಾರೆ. ಪ್ರಸ್ತುತ ಅಧ್ಯಯನ ಕ್ಷೇತ್ರ ವ್ಯಾಪ್ತಿ ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕು. ಹೈದರಾಬಾದ್ ಪ್ರಾಂತ್ಯಕ್ಕೆ ಸೇರಿದ ಐದು ಜಿಲ್ಲೆಗಳಲ್ಲಿ, ರಾಯಚೂರು ಜಿಲ್ಲೆಯ ಐದು ತಾಲೂಕುಗಳಲ್ಲಿ ದೇವದುರ್ಗ ತಾಲೂಕು ಒಂದು. ರಾಯಚೂರಿನಿಂದ ೫೬ ಕಿ.ಮಿ. ಇದ್ದು ಅಕ್ಷಾಂಶ ೧೬° ೨೬ ಉತ್ತರ ಮತ್ತು ರೇಖಾಂಶ ೭೬° ೫೨ ಪೂರ್ವದಲ್ಲಿದೆ.[೧೦] ದೇವದುರ್ಗ ಐತಿಹಾಸಿಕವಾಗಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ದೇವರು ನಿರ್ಮಿಸಿದ ಕಡಿದಾದ ಬೆಟ್ಟಗಳ ಮಧ್ಯದಲ್ಲಿರುವುದರಿಂದ ಇದಕ್ಕೆ ದೇವದುರ್ಗವೆಂಬ ಹೆಸರು ಬಂತು ಎನ್ನುವುದು ಜನಪದ ವಾಡಿಕೆ.[೧೧] ದೇವದುರ್ಗ ತಾಲೂಕು ಸುಮಾರು ೧೮೮ ಹಳ್ಳಿಗಳನ್ನು ಹೊಂದಿದ್ದು ಗಬ್ಬೂರು, ಅರಿಕೇರಿ, ಕೊಪ್ಪರ ಹಾಗೂ ಜಾಲಹಳ್ಳಿ ಎಂಬ ನಾಲ್ಕು ಹೋಬಳಿಗಳನ್ನು ಹೊಂದಿದ್ದು, ದೇವದುರ್ಗ ಆಡಳಿತ ಕೇಂದ್ರವಾಗಿದೆ.[೧೨] ದೇವದುರ್ಗವನ್ನು ಎಡದೊರೆನಾಡು, ದೋಆಬ್ ಪ್ರದೇಶ ಹಾಗೂ ಮೂರು ಲಕ್ಷದ ಸಂಸ್ಥಾನವೆಂದು ಕರೆಯಲಾಗುತ್ತದೆ.[೧೩] ಸುಮಾರು ೧೬ ಮತ್ತು ೧೭ನೇ ಶತಮಾನದಲ್ಲಿ ದೇವದುರ್ಗ ಬೇಡರ ಜಾತಿಯ ಪಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು. ಅಸಂಖ್ಯಾತ ಸ್ಮಾರಕಗಳನ್ನು ಹೊಂದಿರುವ ಈ ಪ್ರದೇಶ ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಕಲಚೂರಿಗಳು ಹಾಗೂ ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತು. ದೇವದುರ್ಗ ತಾಲೂಕಿನ ಖಾನಾಪೂರು, ಮಸರಕಲ್, ದೇವದುರ್ಗ, ಜಾಹಗೀರ್ ಜಾಡಲದಿನ್ನಿ, ಯರಮಸಾಳು, ಇಂಬಗೇರಾ, ನಾಗಡದಿನ್ನಿ, ಮಿಯ್ಯಾಪೂರು, ಸದಕಲಗುಡ್ಡ ಹಾಗೂ ಗಬ್ಬೂರು ಪ್ರದೇಶಗಳು ಪ್ರಸ್ತುತ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ. ಈ ಪ್ರದೇಶಗಳ ಹಗಲುವೇಷಗಾರರ ಬದುಕಿನ ವಿವಿಧ ನೆಲೆಗಳನ್ನು ಗುರುತಿಸುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದಲ್ಲಿ ಮಾಡಲಾಗಿದೆ.

ಅಡಿಟಿಪ್ಪಣಿ

೧. ಆ್ಯಂಟನಿ ಗ್ರ್ಯಾಂಸಿ, 'ಸೆಲೆಕ್ಷನ್ ಫ್ರಂ ದ ಪ್ರಿಸನ್ ನೋಟ್‌ಬುಕ್ಸ್', ಕ್ವಿಂಟಿನ್‌ಹೋರೆ ಗಿಯೋಫ್ರಿನಾವೆಲ್‌ಸ್ಮಿತ್, ಲಂಡನ್, ೧೯೭೧.

೨. ಎಡ್ಗರ್‌ಥರ್ಸ್ಟನ್, 'ಕ್ಯಾಸ್ಟ್ಸ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ', ಏಷಿಯನ್ ಎಜುಕೇಷನ್ ಸರ್ವಿಸ್, ನವದೆಹಲಿ, ಮದ್ರಾಸ್, ೧೯೮೭.

೩. ಕೆ.ಎಸ್. ಸಿಂಗ್, 'ದಿ ಷೆಡ್ಯೂಲ್ಡ್ ಕ್ಯಾಸ್ಟ್ಸ್', ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ದೆಹಲಿ, ೧೯೯೩.

೪. ಎಚ್.ವಿ. ನಂಜುಂಡಯ್ಯ, ಕೆ.ಎಲ್. ಅನಂತಕೃಷ್ಣ ಅಯ್ಯರ್, ಸಂ.೩, ಮಿತ್ತಲ್ ಪ್ರಕಾಶನ, ದೆಹಲಿ, ೧೯೮೮.

೫. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩.

೬. ಮೈತ್ರಿ ಕೆ.ಎಂ., 'ಕ್ಯಾಸ್ಟ್ಸ್ ಸರ್ಟಿಫೀಕೆಟ್ ಪ್ರಾಬ್ಲಮ್ ಆಫ್ ಬುಡುಗ ಜಂಗಮ', ೧೯೯೯.

೭. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೧.

೮. ಹೊಸಮನಿ ಬಿ.ಎಂ., 'ಕರ್ನಾಟಕದ ಹಗಲುವೇಷಗಾರರು', ಅಪ್ರಕಟಿತ ಪ್ರಬಂಧ, ಧಾರವಾಡ ವಿಶ್ವವಿದ್ಯಾಲಯ, ೨೦೦೦.

೧೦. ಸುಜಾತ ಮಲ್ಲನಗೌಡರು, 'ರಾಯಚೂರು ಮತ್ತು ಕೊಪ್ಪಳ ಜಿಲ್ಲೆಯ ಕೋಟೆಗಳು', ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೦.

೧೧. ಸಂ. ಚಂದ್ರಶೇಖರ್ ಹೆಚ್., 'ಸಿರಿದುರ್ಗ', ದೇವದುರ್ಗ ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು ದೇವದುರ್ಗ, ೨೦೦೩, ಪು.೨೮

೧೨. ಅದೇ ಪು.೨೬

೧೩. ಅದೇ ಪು.೮

***

ಅಧ್ಯಾಯ ೨

# ಹಗಲುವೇಷಗಾರರ ಮೂಲ ಮತ್ತು ವಲಸೆ

## ಮೂಲ

ಹಗಲುವೇಷಗಾರ ಜನಸಮುದಾಯವು ಕರ್ನಾಟಕದಲ್ಲಿ ವಾಸವಾಗಿರುವ ಹಲವಾರು ಅಲೆಮಾರಿ ಬುಡಕಟ್ಟು ಸಮುದಾಯಗಳಲ್ಲಿ ಒಂದು. ಈ ಜನಾಂಗವು ತಲ-ತಲಾಂತರದಿಂದ ವೇಷಗಾರಿಕೆಯನ್ನು ತಮ್ಮ ಸರ್ವಸ್ವವೆಂದು ನಂಬಿಕೊಂಡು ಅದರ ಬೆಳಕಿನಲ್ಲಿ ಬದುಕಿದಂತದ್ದು. ಇವರ ಹೆಸರೆ ಹೇಳುವಂತೆ ಹಗಲು ಹೊತ್ತಿನಲ್ಲಿ ದಿನಕೊಂದು ವೇಷಗಳನ್ನು ತೊಟ್ಟು ವೇಷಕ್ಕೆ ತಕ್ಕ ಅಭಿನಯ ಮತ್ತು ಸಂಭಾಷಣೆ ಮಾಡುತ್ತಾ ಜನರ ಮನಸ್ಸನ್ನು ಸೂರೆಗೊಂಡಿದ್ದರಿಂದ ಇವರಿಗೆ ಹಗಲುವೇಷಗಾರರೆಂಬ ಹೆಸರು ಪ್ರಾಪ್ತವಾಗಿದೆ. ವೇಷಗಾರ ಎಂಬ ಹೆಸರಲ್ಲದೆ, ಇನ್ನು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಈ ಸಮುದಾಯವನ್ನು ಕರೆಯುತ್ತಾರೆ. ಹಗಲುವೇಷಗಾರರು, ಬಹುರೂಪಿಗಳು, ಬಿಂಗೇರರು, ಬುಡುಗ ಜಂಗಮ, ಜಾತಿಗಾರರು, ಭೈರೂಪಿಗಳು, ಸೋಗುಗಾರರು ಇತ್ಯಾದಿ. ಇವರ ವೃತ್ತಿಯನ್ನು ಗಮನಿಸಿ ಹಗಲುವೇಷಗಾರರು ಎಂದು ಗುರುತಿಸಲಾಗಿದೆ. ಆಂಧ್ರದಲ್ಲಿ ಈ ಸಮೂಹವನ್ನು ಬೇಡ (ಬುಡ್ಗ) ಜಂಗಾಲು ಎಂದು ಕರೆಯಲಾಗಿದೆ. 'ಬೇಡ' ಎಂಬ ಶಬ್ದಕ್ಕೆ ತೆಲುಗಿನಲ್ಲಿ 'ವದ್ದು' ಹಾಗೂ 'ಎರಡು ಆಣೆ' (೧೨ ಪೈಸೆ) ಎಂದಾಗುತ್ತದೆ ಉತ್ತರ ಕರ್ನಾಟಕದಲ್ಲಿ 'ಬೇಡ' ಎಂದರೆ 'ಭಿಕ್ಷೆಯನ್ನು ಕೇಳು' ಸತ್ತ ದಿನ ಕಾರ್ಯ ಮಾಡುವಾಗ ಬೇಡಿ ಪಡೆಯುವುದು ಈ ಮೂಲಾರ್ಥದಿಂದ ಬೇಡ ಎಂಬ ಪದ ಪ್ರಯೋಗವಾಗಿದೆ.[೧] ಜಂಗಮ ಎಂದರೆ 'ಸದಾ ಸುತ್ತುವವ' ಎನ್ನುವ ಅರ್ಥ ಬರುತ್ತದೆ. ಬೇಡುತ್ತಾ ಸದಾ ಸುತ್ತುವವ ಎಂದು ಅರ್ಥೈಸಬಹುದಾಗಿದೆ.

'ಬುಡ್ಗ ಜಂಗಮ' ಎನ್ನುವ ಪದ ಕನ್ನಡದಲ್ಲಿ ಅಷ್ಟು ಚರ್ಚೆಗೆ ಒಳಪಟ್ಟಿಲ್ಲ ಎಂದು ಹೇಳಬಹುದು. ಆದರೆ ತೆಲುಗು ಭಾಷೆಯಲ್ಲಿ ಹೆಚ್ಚಿನ ಚರ್ಚೆ ನಡೆದಿದೆ. ಪ್ರೊ.ಬಿ. ರಾಮರಾಜ ಅವರು ತಮ್ಮ ತೆಲುಗು 'ಜಾನಪದಗೇಯ ಸಾಹಿತ್ಯಂ' ಎನ್ನುವ ಕೃತಿಯಲ್ಲಿ ಬುಡಿಗೆ ಎನ್ನುವ ವಾದ್ಯ ನುಡಿಸುತ್ತಾ ಕಥೆ ಹೇಳುವ ಇವರನ್ನು 'ಬುಡ್ಗ ಜಂಗಾಲು' ಎಂದು ಕರೆದಿದ್ದಾರೆ.[೨] ಒಂದು ರೀತಿಯಲ್ಲಿ ಇವರ ಹೇಳಿಕೆ ಸರಿ ಎನಿಸುತ್ತದೆ. ಈ ಸಮುದಾಯವೂ ತಮ್ಮ ಭಿಕ್ಷಾಟನೆಯ ಸಂದರ್ಭದಲ್ಲಿ ಬುಡ್ಗವನ್ನು ಪ್ರಮುಖ ಸಾಧನವನ್ನಾಗಿ ಬಳಸುತ್ತಾರೆ. ಮರವೂರು ಕೊದಂಡ ರಾಮರೆಡ್ಡಿಯವರು ತಮ್ಮ 'ಮಾಂಡಲಿಕ ಪದಕೋಶಂ'

ಎನ್ನುವ ಕೃತಿಯಲ್ಲಿ ತಂದಾನ ಕಥೆಗಳನ್ನು ಹೇಳಿ ಜೀವಿಸುವ ಬುರ್ರಕಥೆಯವರು ಬುಡಗೋಲು ವಾದ್ಯವನ್ನು ನುಡಿಸುತ್ತಾ ಭಿಕ್ಷೆ ಎತ್ತುವವರನ್ನು ಬುಡ್ಗ ಜಂಗಾಲ[೩] ಎಂದು ಕರೆದಿದ್ದಾರೆ. ಇಂದಿಗೂ ಈ ಜನತೆ ತಮ್ಮ ಬುಡ್ಗ ವಾದ್ಯದೊಂದಿಗೆ ಬುರ್ರಕಥೆಗಳನ್ನು ಹೇಳುತ್ತಾರೆ. ಮಿಕ್ಕಿಲಿನೇನಿ ರಾಧಾಕೃಷ್ಣ ಮೂರ್ತಿಯವರು ತಮ್ಮ 'ಆಂಧ್ರನಾಟಕರಂಗ' ಚರಿತ್ರೆಯಲ್ಲಿ ಬುಡುಗ ಜಂಗಾಲರನ್ನು ಕುರಿತು ಚರಿತ್ರೆ ಹೇಳುವ ಕಥೆಗಳನ್ನು ಹೇಳುತ್ತಾರೆ. ಈ ಕಥೆಗಳಿಗೆ ಬುರ್ರಕಥೆಗಳು ಎಂದು ಕರೆಯುತ್ತಾರೆ. ಇವರು ಕಥೆಗಳನ್ನು ಹೇಳುವಾಗ ಬುಡಿಗೆ ಎನ್ನುವ ವಾದ್ಯವನ್ನು ವಿಶೇಷವಾಗಿ ಬಳಸುತ್ತಾರೆ. ಅದಕ್ಕಾಗಿ ಇವರಿಗೆ ಬುಡ್ಗ ಜಂಗಾಲು ಎನ್ನುವ ಹೆಸರು ಸೂಕ್ತವೆನಿಸುತ್ತದೆ. ಇವರು ಉಪಯೋಗಿಸುವ ಬುಡಿಗೆಯನ್ನು ಡಿಂಕಿ, ಗುಮ್ಮಟ ಎಂದು ಕೂಡ ಕರೆಯುತ್ತಾರೆ ಎಂದು ಹೇಳಿದ್ದಾರೆ.[೪]

ಹೈದ್ರಾಬಾದ್ ನಿಜಾಮರ ಆಳ್ವಿಕೆಗೆ ಒಳಪಟ್ಟಿದ್ದ ಆಂಧ್ರದ ತೆಲಂಗಾಣ ಮತ್ತು ಸುತ್ತಮುತ್ತಲ ಕಾಡಿನಲ್ಲಿ ವಾಸ ಮಾಡುವ ಹಾಗು ಸದಾ ಸುತ್ತುವ ಜನರನ್ನು ಜಂಗಾಲು ಎಂದು ಕರೆಯುವುದು ವಾಡಿಕೆಯಲ್ಲಿದೆ. ಆ ಪ್ರದೇಶವು ಹಿಂದೆ ಮುಸ್ಲಿಂರ ಆಳ್ವಿಕೆಗೆ ಒಳಪಟ್ಟಿದ್ದರಿಂದ ಅಲ್ಲಿನ ಆಡಳಿತ ಭಾಷೆ ಉರ್ದು ಆಗಿದ್ದರಿಂದ 'ಜಂಗಲ್' ಎಂದರೆ ಕಾಡು ಎಂದು ಅರ್ಥವಿರುವುದರಿಂದ 'ಜಂಗಾಲು' ಎನ್ನುವ ಪದ 'ಸದಾ ಕಾಡು ಸುತ್ತುವವ' ಎನ್ನುವ ಅರ್ಥದ ಜೊತೆಗೆ 'ಕಾಡುಗಳಲ್ಲಿ ವಾಸಿಸುವವ' ಎನ್ನುವ ಅರ್ಥ ಪಡೆದುಕೊಂಡಿರಬೇಕೆಂದು ಊಹಿಸಲಾಗಿದೆ. ವೇಷಗಾರರು ಕಾಡಿನಲ್ಲಿ ವಾಸಿಸುತ್ತಾರೆ ಎಂದು ಅವರ ವಾಸಸ್ಥಳದ ಬಗ್ಗೆ ಹೆಚ್ಚು ಮಹತ್ವ ನೀಡಲಾಗಿದೆ. ತಳವಾರ, ಕಂಬಾರ, ಕುಂಬಾರ ಎಂಬ ವೃತ್ತಿ ಸೂಚಕ ಪದಗಳಂತೆ ಈ ಒಂದು ಹೆಸರು ಬಂದಿರಬೇಕು. 'ವೇಷ' ಎಂಬ ನಾಮಪದಕ್ಕೆ ಧರಿಸು, ಸೊಗುಹಾಕು, ವೇಷವನ್ನು ಮರೆಸಿಕೊಂಡವನು, ತೊಡುವವನು. 'ಗಾರ' ಎಂಬ ತದ್ವಿತ ಪ್ರತ್ಯಯ ಸೇರಿ ವೇಷಗಾರ ಎಂಬ ರೂಪ ಸಿದ್ಧಗೊಂಡಿರಬೇಕು ಎಂದು ಅಭಿಪ್ರಾಯಪಡಲಾಗಿದೆ. ಇವರಿಗೆ ಬಹುರೂಪಿ ವೇಷಧಾರಿ, ಜಾತಿಗಾರ ಎಂಬ ಪರ್ಯಾಯ ನಾಮಗಳು ಭೈರವೇಶ್ವರನ ಕಾವ್ಯದ 'ಕಥಾಮಣಿ ಸೂತ್ರ ರತ್ನಾಕ'ವು ಬಹುರೂಪಿ ಚೌಡಯ್ಯನಿಗೆ ಜಾತಿಗಾರ ಎಂದು ಕರೆದು 'ಅವನು ಹದಿನೆಂಟು ಜಾತಿಯ ನೂರೊಂದು ಕುಲದ ವೇಷವಂ ತೊಟ್ಟು, ನಟಿಸುತ್ತಿದ್ದನೆಂದು ಹೇಳುತ್ತದೆ.'[೫] ಹೀಗೆ ಅನೇಕ ಜಾತಿಯ ವೇಷವನ್ನು ಅಭಿನಯಿಸಿ ತೋರುತ್ತಿದ್ದ ಕಾರಣ ಇವರಿಗೆ ಜಾತಿಗಾರ ಎಂಬ ಹೆಸರು ರೂಢವಾಗಿರಬೇಕೆಂದು, ಜಾತಿಗಾರ ಎಂಬುದರ ಪ್ರಾಚೀನ ಸಂವಾದಿ ಪದ 'ಜಾತಿಡಂಬ' ಡಂಬ ಎಂದರೆ ನಟನೆ ಇದನ್ನು ಗಮನಿಸಿದರೆ ೧೨ನೇ ಶತಮಾನದಲ್ಲಿ ಇವರಿಗೆ ಜಾತಿ ಡಂಬರು ಎಂದು ಕರೆಯುತ್ತಿದ್ದರೆಂದು ಹೇಳಬೇಕಾಗುತ್ತದೆ. ಜನ ಜನಿತವಾದ ಭೃಂಗಿಯ ಕಥೆಗಳನ್ನು ವೇಷಕಟ್ಟಿ ಆಡುವುದರಿಂದ ಬಿಂಗೇರ ಎಂದು, ಬುಡುಗೆ ಎನ್ನುವ ವಾದ್ಯವನ್ನು ಬಳಸಿ ಹಾಡುಗಳನ್ನು ಹಾಡುತ್ತಾ, ವೇಷಗಳನ್ನು ಪ್ರದರ್ಶಿಸುತ್ತಾ, ಅಡ್ಡಾಡುವ ಇವರನ್ನು ಬುಡುಗ ಜಂಗಮರು, ಪ್ರಾಚೀನ ಕಾಲದಲ್ಲಿ ಕಾಡುಗಳಲ್ಲಿ ವಾಸಿಸುವುದರಿಂದ ಜಂಗಾಲರು ಎಂದು

ಕರೆದಿರುವ ಸಾಧ್ಯತೆ ಇದೆ. ಈ ಹೆಸರುಗಳೆಲ್ಲಾ ಕಾಲಮಾನಕ್ಕೆ ಪ್ರದೇಶಕ್ಕೆ ಅನುಗುಣವಾಗಿ ಕರೆದಿರುವಂತಹ ಪರ್ಯಾಯ ನಾಮಗಳೇ ಹೊರತು ಬೇರೆಯವುಗಳಲ್ಲ.

ಹಗಲುವೇಷಗಾರರು ತಮ್ಮ ದೈನಂದಿನ ಕೆಲಸ ಕಾರ್ಯಗಳ ಸಂದರ್ಭದಲ್ಲಿ ಮಾತನಾಡುವ ಭಾಷೆ ತೆಲುಗು, ಅಲ್ಲದೆ ಇವರ ಕುಲಗೋತ್ರಗಳ ಹೆಸರುಗಳು ಹೆಚ್ಚಾಗಿ ಆಂಧ್ರಪ್ರದೇಶದ ಪ್ರಾದೇಶಿಕ ನಾಮಗಳನ್ನೇ ಹೊಂದಿರುವುದರಿಂದ ತೆಲುಗು ಭಾಷೆಯ ಪ್ರಭಾವ ಈ ಸಮುದಾಯದ ಮೇಲೆ ಬೀರಿರುವುದನ್ನು ಕಾಣುತ್ತೇವೆ. ಅಲೆಮಾರಿಗಳ ಮೂಲಸ್ಥಾನವೆಂದು ಹೆಸರು ಪಡೆದಿರುವ ಆಂಧ್ರಪ್ರದೇಶ (ಸುಮಾರು ೫೦ ಲಕ್ಷ ಅಲೆಮಾರಿಗಳನ್ನು ಹೊಂದಿದೆ.) ಹಗಲುವೇಷಗಾರರ ಮೂಲಸ್ಥಳವಾಗಿದೆ.[೬] ಸಂದರ್ಶನದಲ್ಲಿ ಇವರನ್ನು ವಿಚಾರಿಸಿದಾಗ ನಮ್ಮ ಮೂಲಸ್ಥಾನ ಆಂಧ್ರಪ್ರದೇಶ. ಆಂಧ್ರಪ್ರದೇಶದ ವನಪರ್ತಿ, ಕೃಷ್ಣಾರೆಡ್ಡಿಪೇಟೆ, ತೆಲಂಗಾಣ, ಬಿಂಗಿದೊಡ್ಡಿ, ಗದ್ವಾಲ, ಮಹಿಬೂಬನಗರ, ಕರಿಂನಗರ, ಕರ್ನೂಲ್, ರಂಗಾರೆಡ್ಡಿ ಜಿಲ್ಲೆ, ಶ್ರೀಶೈಲ, ಷಮಶಾಬಾದ್ ಎಂದು ಹೇಳುತ್ತಾರೆ.[೭] ನಮ್ಮ ಪೂರ್ವಿಕರು ಅಲ್ಲಿಯೇ ಬಾಳಿ ಬದುಕಿದ್ದಾರೆ. ಷಮಶಾಬಾದ್ ನೀಲಕಂಠಸ್ವಾಮಿ ನಮ್ಮ ಕುಲಗುರುಗಳು, ಪ್ರತಿ ವರ್ಷ ನಾವು ಆಂಧ್ರಕ್ಕೆ ಹೋಗಿ ನಮ್ಮ ಗುರುಗಳಿಗೆ ಕಾಣಿಕೆಯನ್ನು ಸಲ್ಲಿಸಿ ಬರುತ್ತೇವೆ. ಅಲ್ಲದೆ ಶ್ರೀಶೈಲಕ್ಕೆ ನಮ್ಮ ಜನಾಂಗವು ಪ್ರತಿ ವರ್ಷ ನಡೆದುಕೊಳ್ಳುತ್ತಾರೆ ಎಂದು ಹೇಳುತ್ತಾರೆ. ಇವರು ಕರ್ನಾಟಕ ರಾಜ್ಯದ ಯಾವುದೇ ಭಾಗದಲ್ಲಿ ನೆಲೆಸಿದರೂ, ಇವರ ಮಾತೃಭಾಷೆ ತೆಲುಗು ಆಗಿರುವುದರಿಂದ, ಅಲ್ಲದೆ ಅಂಗರಚನೆ ಮತ್ತು ಬಣ್ಣದಲ್ಲಿ ತೆಲುಗರನ್ನು ಹೋಲುವುದರಿಂದ ಮೂಲತಃ ಇವರು ತೆಲುಗಿನವರು ಎಂದು ಹೇಳಬಹುದು. ಇನ್ನೂ ಹೆಚ್ಚಿನ ರೀತಿಯಲ್ಲಿ ಇವರ ಮೂಲದ ಬಗ್ಗೆ ಸಂಶೋಧನೆ ನಡೆಯಬೇಕಾದ ಅಗತ್ಯವಿದೆ. ಅವರ ಮೂಲ ನೆಲೆಯ ಕುರಿತು ವಿಚಾರಿಸುವಾಗ ಆಂಧ್ರದ ಗದ್ವಾಲ ನಮ್ಮ ಮೂಲ ನೆಲೆ ನಮ್ಮ ಪೂರ್ವಿಕರ ಬಂಧುಗಳು ಇನ್ನು ಅಲ್ಲೇ ಕಾಲಕಳೆಯುತ್ತಿದ್ದಾರೆ. ರೆಡ್ಡಿರಾಜರ ಕಾಲದಲ್ಲಿ ನಮಗೆ ರಾಜಾಶ್ರಯ ದೊರೆತಿತ್ತು. ನಮ್ಮ ಜನಾಂಗವು ರಾಜನ ಆಸ್ಥಾನದಲ್ಲಿ ಪ್ರತಿ ದಿನ ಒಂದೊಂದು ವೇಷವನ್ನು ಪ್ರದರ್ಶನ ಮಾಡಿ ರಾಜನ ಮೆಚ್ಚುಗೆಯನ್ನು ಪಡೆದಿದ್ದ ಕಾರಣ ರಾಜನು ನಮಗೆ ಗದ್ವಾಲ್ ತಾಲೂಕಿನಲ್ಲಿ ಬರುವ 'ಬಿಂಗಿದೊಡ್ಡಿ' ಎನ್ನುವ ಪ್ರದೇಶವನ್ನು ಉಡುಗೊರೆಯಾಗಿ ನೀಡಿದ್ದನು.[೮] ಆ ಪ್ರದೇಶದಲ್ಲಿ ನಮ್ಮ ಸಮುದಾಯವೂ ನೆಲೆಗೊಂಡಿದೆ. ಆದುದರಿಂದ ಆಂಧ್ರಪ್ರದೇಶವೇ ನಮ್ಮ ಮೂಲಸ್ಥಾನವೆಂದು ಹೇಳುತ್ತಾರೆ. ಇವರು ಶ್ರೀಶೈಲ ಮತ್ತು ಷಮಶಾಬಾದ್‌ಗಳನ್ನು ತಮ್ಮ ಧಾರ್ಮಿಕ ಕೇಂದ್ರವನ್ನಾಗಿ ಗುರುತಿಸಿಕೊಂಡಿದ್ದಾರೆ. ಇಂದಿಗೂ ಶ್ರೀಶೈಲ ಮತ್ತು ಷಮಶಾಬಾದ್ ಮಠದ ಪರವಾಗಿ ಮುಡುಪನ್ನು ಕಟ್ಟಿ ಇಟ್ಟುಕೊಂಡು ಪ್ರತಿವರ್ಷ ಜಾತ್ರೆಯಲ್ಲಿ ಭಾಗವಹಿಸಿ ತಮ್ಮ ಮುಡುಪನ್ನು ಕೊಟ್ಟು ಬರುತ್ತಾರೆ. ಶ್ರೀಶೈಲ ಗುಡ್ಡಗಾಡುಗಳಿಂದ ಕೂಡಿದ ತಪ್ಪಲು ಪ್ರದೇಶವಾಗಿರುವುದರಿಂದ ಇವರ ಮೂಲಸ್ಥಾನವಾಗಿರಬಹುದೆಂದು ಹೇಳಬಹುದು.

### ಐತಿಹಾಸಿಕ ಹಿನ್ನೆಲೆ

ಯಾವುದೇ ಬುಡಕಟ್ಟು ಸಮುದಾಯವನ್ನು ಅಧ್ಯಯನ ಮಾಡಿದರೂ ಅವರ ಈಗಿನ ಜೀವನ ವಿಧಾನದಿಂದಲೇ ಆ ಬುಡಕಟ್ಟಿನಲ್ಲಿ ಆಗಿರಬಹುದಾದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಅನಿವಾರ್ಯವಾಗಿ ನಾವು ಆ ಬುಡಕಟ್ಟು ಮಾಹಿತಿಗಾಗಿ ತಡಕಾಡುತ್ತಾ ಇದುವರೆಗೆ ನಡೆದಿರುವ ಅಧ್ಯಯನಗಳನ್ನು ಪರಿಶೀಲಿಸುವುದರ ಜೊತೆಗೆ ಐತಿಹಾಸಿಕ ಹಾಗೂ ಪೌರಾಣಿಕ ಐತಿಹ್ಯಗಳೇನಾದರೂ ದೊರೆತಲ್ಲಿ ಅವುಗಳನ್ನು ಕೂಡ ಅನುಲಕ್ಷಿಸದೇ ಆಕರಗಳಾಗಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳುವುದು ಅಗತ್ಯವಾಗಿದೆ. ಈ ಜನಾಂಗ ವೇಷಗಾರಿಕೆಯನ್ನು ಯಾವ ಉದ್ದೇಶಕ್ಕೋಸ್ಕರ ಯಾವ ಕಾಲದಲ್ಲಿ ತೊಟ್ಟಿತು ಎಂಬ ಪ್ರಶ್ನೆಗಳಿಗೆ ಸ್ಪಷ್ಟ ಉತ್ತರಗಳಿಲ್ಲ.

ಡಾ. ನಾಗೇಶ ಹೆಚ್.ಕೆ., ಇವರ ಅಭಿಪ್ರಾಯದಂತೆ ಅರಸೊತ್ತಿಗೆಯಲ್ಲಿ ಇದ್ದಂತಹ ದಬ್ಬಾಳಿಕೆಯಿಂದ ಅಧಿಕಾರ ವರ್ಗದವರು ಕೆಳವರ್ಗದ ಸಮುದಾಯಗಳ ಸವಲತ್ತುಗಳನ್ನು ದೋಚಿಕೊಂಡರು. ಅಂತಹ ಸಂದರ್ಭದಲ್ಲಿ ಮೂಲ ಸವಲತ್ತುಗಳನ್ನು ಕಳೆದುಕೊಂಡು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ಮಾನ್ಯತೆ ಕಳೆದುಕೊಂಡು ಹೊಟ್ಟೆಪಾಡಿಗಾಗಿ ತಡಕಾಡುವ ಸಂದರ್ಭ ಬಂದಿತು. ಇಂತಹ ಸಂದರ್ಭದಲ್ಲಿ ಹೊಟ್ಟೆ ತುಂಬಿಸಿಕೊಳ್ಳಲು ಬೇರೆ ಬೇರೆ ವೃತ್ತಿಗಳನ್ನು ಅನುಸರಿಸಬೇಕಾಗಿ ಬಂದಿತು. ಅಂತೆಯೇ ಈ ವೇಷಗಾರ ಸಮೂಹವು ಕೂಡ ಹಗಲುವೇಷಗಾರರಾಗಿ ರೂಪುಗೊಂಡರು ಎಂದು ಹೇಳುತ್ತಾರೆ. ದಿನಾಂಕ ೬.೧.೦೪ರಂದು ರಾಮಣ್ಣ ಎಂಬ ವಕ್ತೃವನ್ನು ಸಂದರ್ಶಿಸಿದಾಗ ಹಿಂದೆ ಪ್ರತಾಪರುದ್ರನ ಕಾಲದಲ್ಲಿ ಧರ್ಮಪ್ರಚಾರಕ್ಕಾಗಿ ಕೆಳವರ್ಗಕ್ಕೆ ಸೇರಿದ ಸಮುದಾಯಗಳನ್ನು ಕೂಡಿಸಿ ಒಬ್ಬೊಬ್ಬರಿಗೆ ಸಂಗೀತ ವಾದ್ಯಗಳನ್ನು ನೀಡಿ ಧರ್ಮಪ್ರಚಾರಕ್ಕೆ ಕಳುಹಿಸಿದನೆಂದು ಅದರಲ್ಲಿ ವೇಷಗಾರರಾದ ನಾವು ಒಬ್ಬರೆಂದು ಹೇಳುತ್ತಾರೆ.[೬] ಸುಮಾರು ಒಂಬತ್ತನೆಯ ಶತಮಾನದಲ್ಲಿ ಆಳ್ವಿಕೆ ಮಾಡಿದ ಕಾಕತೀಯರ ಪ್ರಸಿದ್ಧ ದೊರೆ ಪ್ರತಾಪರುದ್ರನ ಕಾಲದಲ್ಲಿ ಶೈವ ಧರ್ಮ ಪ್ರಚಾರಕ್ಕಾಗಿ ಈ ವೇಷಗಾರರಿಗೆ ವೃತ್ತಿ ಮೂಲಕ ಪ್ರಚಾರ ಮಾಡಲು ಪ್ರೋತ್ಸಾಹ ನೀಡಿರಬಹುದು ಅನ್ನಿಸುತ್ತದೆ. ಇನ್ನು ಕೆಲವರು ನಾವು ಕ್ಷತ್ರೀಯ ಕುಲಕ್ಕೆ ಸೇರಿದವರು ನಮ್ಮ ಪೂರ್ವಿಕರು ಕ್ಷತ್ರಿಯರಾಗಿದ್ದರೂ ಯಾವುದೋ ಕಾರಣಕ್ಕಾಗಿ ಹಗಲುವೇಷಗಾರರಾಗಿ ರೂಪುಗೊಂಡಿದ್ದೇವೆ ಎನ್ನುತ್ತಾರೆ. ಇದಕ್ಕೆ ಸ್ಪಷ್ಟ ಪುರಾವೆಗಳಿಲ್ಲ. ಏನೇ ಆದರೂ ಈ ಜನಾಂಗದ ಪ್ರಾಚೀನ ಇತಿಹಾಸದ ಬಗ್ಗೆ ಇನ್ನು ಹೆಚ್ಚಿನ ಸಂಶೋಧನೆ ನಡೆಯುವ ಅಗತ್ಯತೆ ಇದೆ.

### ಪೌರಾಣಿಕ ಹಿನ್ನೆಲೆ

ಶಿವಪಾರ್ವತಿ ಕೈಲಾಸದಲ್ಲಿ ಕುಳಿತಾಗ ಭೃಂಗಿಯು ದಿನನಿತ್ಯ ಅವರ ಮುಂದೆ ಸಂಗೀತದೊಂದಿಗೆ ನೃತ್ಯವನ್ನು ಮಾಡಿ ಅವರ ಮನಸ್ಸನ್ನು ಆನಂದಗೊಳಿಸುತ್ತಿದ್ದನು. ಹೀಗೆ ದಿನನಿತ್ಯ ಶಿವಪಾರ್ವತಿಯರಿಗೆ

ಆನಂದಗೊಳಿಸುತ್ತಿರುವಾಗ ಭೃಂಗಿಯು ಒಂದು ವರವನ್ನು ಬೇಡಿದನು. ಇವನ ನೃತ್ಯವನ್ನು ಮೆಚ್ಚಿದ ಶಿವಪಾರ್ವತಿಯರು ಅವನಿಗೆ ಲಿಂಗಧಾರಣೆ ಮಾಡಿದರು. ಹೀಗೆ ಒಂದು ದಿನ ಶಿವಪಾರ್ವತಿಯರು ಕೈಲಾಸದಲ್ಲಿ ಕುಳಿತುಕೊಂಡಾಗ ಭೃಂಗಿಯು ಹೋಗಿ ಶಿವಪಾರ್ವತಿಯರ ಮುಂದೆ ನಿಂತುಕೊಂಡು ಶಿವನಿಗೆ ಎರಡು ಕೈಯಿಂದ ಹಾಗೂ ಪಾರ್ವತಿಗೆ ಒಂದು ಕೈಯಿಂದ ನಮಸ್ಕಾರ ಮಾಡಿದನು. ಆಗ ಶಿವಪಾರ್ವತಿಯರ ಪಕ್ಕದಲ್ಲಿದ್ದ ನಾರದನು ಪಾರ್ವತಿಯನ್ನು ಕುರಿತು 'ಭೃಂಗಿಯು ಶಿವನಿಗೆ ಎರಡು ಕೈಯಿಂದ ನಮಸ್ಕಾರ ಮಾಡಿದನು, ನಿನಗೇಕೆ ಒಂದು ಕೈಯಿಂದ ನಮಸ್ಕಾರ' ಎಂದು ಚುಚ್ಚು ಮಾತನ್ನು ಪಾರ್ವತಿಗೆ ಹೇಳಿದನು. ನಾರದನ ಮಾತನ್ನು ಕೇಳಿ ಕೋಪಗೊಂಡ ಪಾರ್ವತಿಯು 'ನಿಮ್ಮ ಮಾತಿನ ಅರ್ಥ ತಿಳಿಯಲಿಲ್ಲ ನಾರದರೇ' ಅಂದಾಗ 'ನಿನಗೆ ಒಂದು ಕೈಯಿಂದ ನಮಸ್ಕಾರ ಮಾಡಲು ಕಾರಣವೇನು? ಇಡೀ ಜಗತ್ತೆ ನಿನ್ನನ್ನು ಸರ್ವಶಕ್ತಿ, ಆದಿಶಕ್ತಿ ಎಂದು ಪೂಜಿಸುತ್ತಿರುವಾಗ ನೀನು ಶಿವನಿಗಿಂತ ಸಣ್ಣಾಕೀಯೇ?' ಎಂದನು. ನಾರದನ ಮಾತಿನಿಂದ ಮತ್ತಷ್ಟು ಕೋಪಗೊಂಡ ಪಾರ್ವತಿಯು 'ಎಲೋ ಭೃಂಗಿ ನನ್ನ ವಸ್ತು ನನಗೆ ಕೊಡು' ಎಂದಳು. ಆಗ ಭೃಂಗಿಯು 'ಯಾಕೆ ತಾಯಿ ನಾನೇನು ತಪ್ಪು ಮಾಡಿದೆನೆಂದು ನೀನು ಈ ರೀತಿ ಕೇಳುತ್ತಿಯಾ' ಎಂದನು. ಆಗ ಪಾರ್ವತಿಯು 'ಶಿವನಿಗೇಕೆ ಎರಡು ಕೈಯಿಂದ ನಮಸ್ಕಾರ ಮಾಡಿದಿ, ನನಗೇಕೆ ಒಂದು ಕೈಯಿಂದ ನಮಸ್ಕಾರ ಮಾಡಿದಿ' ಎಂದಳು. ಆಗ ಭೃಂಗಿಯು 'ತಾಯಿ ಶಿವನು ದೊಡ್ಡವನು, ನೀನು ಅವನ ಅರ್ಧಾಂಗಿನಿ. ಅದಕ್ಕಾಗಿ ನಿನಗೆ ಒಂದು ಕೈಯಿಂದ ನಮಸ್ಕಾರ ಮಾಡಿದೇನು' ಎಂದನು. ಆಗ ಪಾರ್ವತಿ 'ನಾನು ಸಣ್ಣಾಕಿ ಆದರೆ ನನ್ನ ವಸ್ತುಗಳನ್ನು ನನಗೆ ಕೊಡು' ಎಂದಳು. ಆಗ ಭೃಂಗಿಯು 'ಅಮ್ಮ ನಿನ್ನ ವಸ್ತು ತಂಬೂರಿ, ವೀಣಾ, ಮೃದಂಗ, ತಾಳ ಇವೇ ತಾನೆ ತೆಗೆದುಕೋ' ಎಂದನು. ಆಕೆ 'ಇವು ನನ್ನವು ಅಲ್ಲ, ನನ್ನ ವಸ್ತುಗಳು ಬೇರೆ ಉಂಟು' ಎಂದಳು. ಭೃಂಗಿಯು 'ಬೇರೆ ಇದ್ದರೆ ನಿನ್ನ ಸಾಮಾನು ನೀನು ತೆಗೆದುಕೋ' ಎಂದನು. ಆಗ ಪಾರ್ವತಿಯೂ 'ಗಾಳಿಯ ರೂಪದಲ್ಲಿ ಭೃಂಗಿಯ ಮೂಗಿನ ಮುಖಾಂತರ ಒಳ ಪ್ರವೇಶ ಮಾಡಿ ಭೃಂಗಿಯ ರಕ್ತ ಮತ್ತು ಮಾಂಸವನ್ನು ತೆಗೆದುಕೊಂಡಳು. ಆಗ ಭೃಂಗಿಯ ದೇಹದಲ್ಲಿ ಎಲುಬು ತೊಗಲು ಉಳಿಯಿತು, ಇವು ಶಿವನವು' ಎಂದಳು. ಭೃಂಗಿಯು 'ಶಿವ ಶಿವ' ಎನ್ನುತ್ತಾ ನೆಲಕ್ಕೆ ಉರುಳಿ ಬಿದ್ದನು. ಆಗ ಶಿವನು ಕೋಲನ್ನು ಕೊಟ್ಟು ನಿಲ್ಲಿಸಿದನು. ಇದರಿಂದ ತ್ರಿಮೂರ್ತಿಗಳಿಗೆ ಬಹಳಷ್ಟು ಚಿಂತೆಯಾಯಿತು. ಈಗಾದರೆ ಮುಂದೆ ಕಲಿಯುಗ ಹುಟ್ಟುವುದು ಹೇಗೆ? ಎನ್ನುವ ವಿಚಾರ ತ್ರಿಮೂರ್ತಿಗಳಲ್ಲಿ ಹೊಳೆಯಿತು. ಆಗ ತ್ರಿಮೂರ್ತಿಗಳು ಪಾರ್ವತಿಯ ಮುಂದೆ ಕುಳಿತುಕೊಂಡು 'ಪಾರ್ವತಿ ನೀನು ಭೃಂಗಿಗೆ ಬೇಕಾದರೆ ಶಾಪವನ್ನು ಕೊಡು, ಆ ದೇಹದಲ್ಲಿ ಅರ್ಧ ಭಾಗ ನಿನ್ನದು, ಅರ್ಧಭಾಗ ಪರಮಾತ್ಮನದು ಎಂದು ವಿಷ್ಣು, ಬ್ರಹ್ಮ' ಬೇಡಿಕೊಂಡರು. ಆಗ ಪಾರ್ವತಿಯು 'ಭೃಂಗಿಯು ನಾನು ಕೊಟ್ಟ ಶಾಪವನ್ನು ನೆರವೇರಿಸುವನೇ?' 'ನೀನು ಕೊಟ್ಟ ಶಾಪವನ್ನು ನೆರವೇರಿಸುವಂತೆ ಭೃಂಗಿಯನ್ನು ಒಪ್ಪಿಸುವೆವು' ಎಂದರು

ತ್ರಿಮೂರ್ತಿಗಳು. ಆಗ ಪಾರ್ವತಿಯು ಭೃಂಗಿಯು ಮುಂದೆ ಕಲಿಯುಗದಲ್ಲಿ ಹುಟ್ಟಿ ಭೃಂಗಿಯ ಜಂಗಮನಾಗಿ ಮನೆಮನೆಯನ್ನು ಸುತ್ತಿ ಭಿಕ್ಷಾಟನೆಯನ್ನು ಮಾಡುತ್ತಾ ಸಂಗೀತ ಪಾತ್ರಧಾರಿಗಳಾಗಿ ವಿಧವಿಧದ ವೇಷಗಳನ್ನು ಧರಿಸುತ್ತಾ ಮನೆ ಮನೆಯ ಮುಂದೆ ನಿತ್ಯ ಪಾತ್ರಗಳನ್ನು ಪ್ರದರ್ಶಿಸುತ್ತಾ ಅವರು ಕೊಟ್ಟಂತಹ ಪ್ರಸಾದದಲ್ಲಿ ನೀನು ಉದ್ಧಾರ ಆಗಿ, ಸಮಾಜದಲ್ಲಿ ಸಾಮಾಜಿಕ ಮನೋರಂಜನೆ ನೀಡುತ್ತಾ ಜೀವನ ಸಾಗಿಸು ಎಂದಳು. ಅಂದಿನಿಂದ ಭೃಂಗಿಯು, ಬಿಂಗೇರನಾಗಿ, ವೇಷಗಾರನಾಗಿ, ಬಹುರೂಪಿಯಾಗಿ, ಜಾತಿಗಾರನಾಗಿ ರೂಪಗೊಂಡನು ಎಂದು ತಮ್ಮ ಪೌರಾಣಿಕ ಕಥೆಯನ್ನು ಹೇಳುತ್ತಾರೆ. ಅಂದಿನಿಂದ ನಾವು ವೇಷಧಾರಿಗಳಾಗಿ ಬಹುರೂಪದ ವೇಷಗಳನ್ನು ಧರಿಸುತ್ತಾ ಊರಿಂದ ಊರಿಗೆ ಸಂಚರಿಸುತ್ತಾ ಕಲೆಯನ್ನು ಪ್ರದರ್ಶನ ಮಾಡುತ್ತಾ ಬಂದಂತಹ ಪ್ರಸಾದದಲ್ಲಿ ಜೀವನ ಕಳೆಯುತ್ತಿದ್ದೇವೆ ಎಂದು ತಮ್ಮ ಜನಾಂಗದ ಹಿನ್ನೆಲೆಯನ್ನು ಹೇಳುತ್ತಾರೆ.[೧೦]

**ದಂತಕತೆ**

ಆಂಧ್ರದ ರೆಡ್ಡಿರಾಜರ ಕಾಲದಲ್ಲಿ ಮೊದಲು ನಮ್ಮ ಪೂರ್ವಿಕರು ರಾತ್ರಿ ವೇಳೆ ತಮ್ಮ ವಿಧವಿಧದ ವೇಷಗಳೊಂದಿಗೆ ದಿನನಿತ್ಯ ರಂಗಮಂದಿರದಲ್ಲಿ ರಾಜನ ಆಸ್ಥಾನದಲ್ಲಿ ಕಲೆಯನ್ನು ಪ್ರದರ್ಶನ ಮಾಡುತ್ತಿದ್ದರು. ಹೀಗೆ ದಿನನಿತ್ಯ ಒಂದೊಂದು ವೇಷದಲ್ಲಿ ಪ್ರದರ್ಶನ ಮಾಡುತಿರಲು ಒಂದು ಟನ ರಾಜನ ವೇಷದ ಪಾತ್ರವನ್ನು ಕುರಿತು ಪ್ರದರ್ಶನ ಮಾಡುವ ಸರದಿ ಬಂದಿತು. ಆದರೆ ರಾಜನು ಯಾವ ವಿಧದ ಉಡುಪು ಮತ್ತು ಆಭರಣಗಳನ್ನು ಧರಿಸಿ ಆಸ್ಥಾನಕ್ಕೆ ಬರುತ್ತಾನೆ ಎಂಬುದು ಭೃಂಗಿಗಳಿಗೆ ಚಿಂತೆಯಾಯಿತು. ಆ ಸಂದರ್ಭದಲ್ಲಿ ಭೃಂಗಿಗಳು ರಾಜನ ಮಂತ್ರಿಯನ್ನು ಕೇಳಿದಾಗ ಮಂತ್ರಿಯು ಮಹಾನವಮಿಯ ಹಬ್ಬದಂದು ಒಂದು ಬಿಳಿ ಆನೆ ಮೇಲೆ ರಾಜ ಪೋಷಕ ಉಡುಪು-ಆಭರಣಗಳನ್ನು ಧರಿಸಿ ರಾಜಾಂಗಣಕ್ಕೆ ಬರುತ್ತಾನೆ. ಆತನೆ ರಾಜನು ಎಂದು ಮಂತ್ರಿಯು ಭೃಂಗಿಗಳಿಗೆ ಹೇಳಿದನು. ಭೃಂಗಿಗಳು ಒಂದು ಬಿಳಿ ಆನೆ ಪಡೆದುಕೊಂಡು ರಾಜನ ವೇಷಭೂಷಣಗಳನ್ನು ತೊಟ್ಟು ಭೃಂಗಿಯು ಆಡುತ್ತಿದ್ದನು. ಆಗ ರಾಜನು ಬಿಳಿ ಆನೆಯ ಮೇಲೆ ರಾಜಾಂಗಣಕ್ಕೆ ಬರುವಾಗ ರಾಜನ ಮಗಳು ತನ್ನ ಮಗುವನ್ನು ಎತ್ತಿಕೊಂಡು ಭೃಂಗಿಯ ಕಲೆಯನ್ನು ನೋಡುತ್ತಾ ಅರಮನೆಯ ಮೇಲಿನ ಮಹಡಿಯ ಮೇಲೆ ನಿಂತಿದ್ದಳು. ಹೀಗೆ ಮೈಮರೆತು ನೋಡುತ್ತಿರುವ ವೇಳೆಯಲ್ಲಿ ತನ್ನ ಮಗುವಿನ ಪ್ರಜ್ಞೆಯನ್ನು ಮರೆತು ಕೂಸನ್ನು ಕೆಳಗೆ ಬಿಟ್ಟಳು ಇದನ್ನು ನೋಡಿದ ಭೃಂಗಿಗಳು ಕೂಸನ್ನು ಒಂದು ಗುಡಾರದಲ್ಲಿ ರಕ್ಷಣೆ ಮಾಡಿದರು. ಇದನ್ನು ಗಮನಿಸಿದ ರಾಜನ ಮಗಳು ತನ್ನ ತಂದೆಯ ಮುಂದೆ ಬೇಡಿಕೆಯೊಂದನ್ನು ಇಟ್ಟಳು. ಏಕೆಂದರೆ ಭೃಂಗಿಗಳ ಕಲೆಯು ಎಂತಹವರ ಮನಸ್ಸನ್ನು ಸೂರೆಗೊಳ್ಳುತ್ತದೆ. ಇವರ ಕಲೆಯಲ್ಲಿ ಮೈಮರೆತು ನನ್ನ ಮಗುವನ್ನು ಕಳೆದುಕೊಳ್ಳುವ ಸ್ಥಿತಿಯಲ್ಲಿದ್ದೆನು. ಇವರು ನನ್ನ ಮಗುವನ್ನು ರಕ್ಷಣೆ ಮಾಡಿದರು. ಇವರಿಗೆ ನೀನು ಏನಾದರೂ ಇನಾಮು ಕೊಡಬೇಕು ಎಂದು ತಂದೆಯ ಮುಂದೆ ತನ್ನ

ಬೇಡಿಕೆಯನ್ನಿಟ್ಟಳು. ಮಗಳ ಮಾತನ್ನು ಮನ್ನಿಸಿ ರಾಜನು ಭೃಂಗಿಗಳಿಗೆ ಏಳು ಊರು ಜಾಹಗೀರನ್ನು ಕೊಡುಗೆಯಾಗಿ ನೀಡಿದನು. ಅಲ್ಲದೆ ನೀವು ಇನ್ನು ಮುಂದೆ ರಾತ್ರಿ ವೇಳೆ ಪ್ರದರ್ಶನ ಮಾಡುವುದನ್ನು ಬಿಟ್ಟು ಹಗಲು ವೇಳೆ ನಿಮ್ಮ ಕಲೆಯನ್ನು ಪ್ರದರ್ಶನ ಮಾಡಿ ಎಂದು ಆಜ್ಞೆಯನ್ನು ಮಾಡಿದನು. ಅಂದಿನಿಂದ ರಾಜನ ಆಜ್ಞೆಯ ಮೇರೆಗೆ ನಾವು ರಾತ್ರಿ ವೇಳೆ ಕಲೆಯನ್ನು ಪ್ರದರ್ಶನ ಮಾಡುವುದು ಬಿಟ್ಟು ಹಗಲು ವೇಳೆ ಪ್ರದರ್ಶನ ಮಾಡುವುದನ್ನು ಆರಂಭಿಸಿದೆವು. ಅಂದಿನಿಂದ ಹಗಲುವೇಷಧಾರಿಗಳಾಗಿ ಮಾರ್ಪಾಡು ಹೊಂದಿದೆವು ಎಂದು ತಮ್ಮ ಜನಾಂಗದ ಹಿನ್ನೆಲೆಯನ್ನು ಹೇಳುತ್ತಾರೆ.[೧೧]

**ಸಾಹಿತ್ಯಿಕ ಆಧಾರಗಳು**

ಹಗಲುವೇಷಗಾರರ ಬಗ್ಗೆ ಸಾಹಿತ್ಯಿಕ ಆಧಾರಗಳು ಸಂಪೂರ್ಣವಾಗಿ ಅವರ ಮಾಹಿತಿ ನೀಡದಿದ್ದರೂ ಅವರ ವೃತ್ತಿ ಮತ್ತು ಧರ್ಮ ಪ್ರಚಾರದ ಬಗ್ಗೆ ಅವರ ಜೀವನ ಕ್ರಮದ ಬಗ್ಗೆ ಹಲವು ಸುಳಿವುಗಳನ್ನು ನೀಡುತ್ತವೆ.

**ಕೃತಿಗಳು**

ಪಗರಣದ ಕುರಿತು ಕನ್ನಡದಲ್ಲಿ ಲಭ್ಯವಿರುವ ಮೊದಲ ಗ್ರಂಥ 'ಕವಿರಾಜಮಾರ್ಗ'ದಲ್ಲಿ ಪಗರಣ ಇದೊಂದು ಹಾಸ್ಯ ಪ್ರಧಾನ ಕಲೆ ಎಂದು ಹೇಳಿರುವುದು ಕುತೂಹಲಕ್ಕೆ ಎಡೆ ಮಾಡಿಕೊಡುತ್ತದೆ.

> “ಮಿಗೆ ದುಷ್ಕರ ಕಾವ್ಯಂಗಳೊ
>
> ಳಗರ್ಹಿತ ಪ್ರಾಯಮಕ್ಕುಮಾಶ್ರುತಿಕಷ್ಟಂ
>
> ಪಗರಣದೊಳುಟಿದ ಮೂಱುಂ
>
> ನಗಿಸುಗುಮಪ್ಪುದಱಿನಲ್ಲಿ ಗಂತದೋಷಂ”||[೧೨]

ಶೃತಿಕಷ್ಟ, ಶೃತಿದುಷ್ಟ, ಅರ್ಥದುಷ್ಟ ಮತ್ತು ಕಲ್ಪನೋಕ್ತಿ ಕಷ್ಟಗಳೆಲ್ಲವೂ ಕಾವ್ಯದೋಷಗಳೇ. ಆದರೆ ಶೃತಿಕಷ್ಟವನ್ನುಳಿದು ಮೂರು ದೋಷಗಳು ನಗೆಯನ್ನು ಹುಟ್ಟಿಸುವ ಪಗರಣವೆಂಬ ಪ್ರಕಾರದಲ್ಲಿ ಕೂಡುವುದರಿಂದ ದೋಷಗಳಾಗುವುದಿಲ್ಲ ಎಂಬುದು ಈ ಮೇಲಿನ ಸಾಲಿನ ತಿರುಳಾಗಿದೆ. ವಡ್ಡಾರಾಧನೆಯಲ್ಲಿ ಬರುವ ಕಾರ್ತಿಕೇಯ ಮುನಿಯ ಕಥೆಯಲ್ಲಿ ಪಗರಣದ ಪ್ರಸ್ತಾಪ ಬಂದಿದೆ. ಈ ಕಥೆಯಲ್ಲಿ ವೀರಶ್ರಿ ಎಂಬ ರಾಣಿ ತನ್ನ ಅಣ್ಣನನ್ನು ಕಳೆದುಕೊಂಡು ಗೋಳಾಡುತ್ತಿರುತ್ತಾಳೆ. ಅದನ್ನು ಕಂಡ ರಾಜನು ಇವಳನ್ನು ನಗುವಂತೆ ಮಾಡಿದವರಿಗೆ ಬಹುಮಾನ ಕೊಡುವುದಾಗಿ ಘೋಷಿಸುತ್ತಾನೆ.

“[illegible] ಗಳಸಿಟ್ಟು ಬಂದು ಮುಂದೆ ಅಡಿಯುಂ ಪಾಡಿಯುಂ ನಗಿಸಿಯುಂ ಎಂತು ಅಟ್ಕಿ ಮಟ್ಟದಿರ್ದೊಡೆ,

ಒರ್ವಂ ಕರಿಯ ಕಚ್ಚುಟಮನುಟ್ಟು ಮೈಯೆಲ್ಲಂ ಮಸಿಯಂ ಪೂಸಿ ಬೋಟಿದಲೆವೆರಸು ಬಾಯೊಳ್ ಕವಡಿಕೆಗಳಂ ಪಲ್ಗಳಂತೆ ಮಾಡಿ ಕುಂಚಮುಂ ಗುಂಡಿಗೆಯುಮಂ ಪಿಡಿದು ಬರ್ಪೊನನ್ ಅರಸಂ ಕಂಡು ಇಂತಂದನ್, ಎಲೆ ಅರಸಿ ನಿನ್ನ ಸಹೋದರರಂಗಳಪ್ಪ ಭಟಾರರ್ ಅಬಪ್ಪೊರೆ ಎಂದು ಪೇಟ್ಟಾಗಳ್ ಎಲ್ಲಿರ್ದ್ದರ್ ಎಂದು ಎಟ್ಟು ನೋಡಿ ಕಾಣದೆ ಆ ರೂಪಂ ಕಂಡು ನಕ್ಕು ದುಃಖಮಂ ಮಟಿದೊಳ್ ಆಗಳ್ ಆ ನಗಿಸಿದ ಪಗರಣಿಗರಿಗೆ ಪಿರಿದು ಕಸವರಮನಿತ್ತೊನ್. ಅಂದರೆ ಇತ್ತ ಬಾದುಬ್ಬೆಯ ಪರ್ವಮುಂ ಪಗರಣದ ಅಟಪಾಟಮಂ ಆದವು."[೧೩] ವೇಷಗಾರರು ಎನಿಸಿಕೊಂಡ ಪಗರಣಿಗರು ವಿಕೃತ ವೇಷಗಳಿಂದ ಜನರನ್ನು ನಗಿಸುತ್ತಿದ್ದರು. ಈ ಸಾಹಿತ್ಯವನ್ನು ಆಧರಿಸಿ ನೋಡಿದರೆ ಇವರ ಪ್ರಾಚೀನತೆ ೯ನೇ ಶತಮಾನಕ್ಕೆ ಹೋಗುತ್ತದೆ.

ನಯಸೇನನ ಧರ್ಮಾಮೃತದಲ್ಲಿಯೂ ಈ ಪಗರಣದ ಪ್ರಸ್ತಾಪ ಅಲ್ಲಲ್ಲಿ ಕಂಡು ಬರುತ್ತದೆ.

"ಪಗರಣಿಗನಂತೆ ವಿಪರೀತನಾಗಿ (ಪದ್ಯ ೧೦೨)

ಪಗರಣಮಂ ನೋಡುವಂತೆ ನಗುತ್ತಂ (ಪದ್ಯ ೭೭)

ಕಂಡು ವರ್ನಗುವರಲ್ಲದೆಯವರಾಟಕ್ಕೆ ಲಕ್ಷಣಂನೋಡರ್ (ಪದ್ಯ ೧೦೩)

ಮೂರು ದಿನದ ಪಗರಣಕ್ಕೆ ಗಡ್ಡ ಮೀಸೆ ಮಂಡೆಯಂಬೋಳಿಸಿಕೊಳ್ವಂತೆ"[೧೪] (ಪದ್ಯ ೬೭)

ಅಂದರೆ ಈ ಪಗರಣಕ್ಕೆ ಖಾಯಂ ಕಲೆಗಾರರಿದ್ದಿಲ್ಲವೆಂದು ತೋರುತ್ತದೆ. ಈ ಪಗರಣದ ನಟರು ಹವ್ಯಾಸಿಗಳಾಗಿದ್ದರು. ಏಕೆಂದರೆ ಮೂರು ದಿನದ ಪಗರಣಕ್ಕೆ ಗಡ್ಡ, ಮೀಸೆ, ತಲೆ ಬೋಳಿಸಿಕೊಳ್ಳುವಂತೆ ಎನ್ನುವ ನುಡಿ ಖಚಿತಪಡಿಸುತ್ತದೆ. ಬಹುಶಃ ಇಂತಹ ಸಂದರ್ಭಗಳು ಹಬ್ಬ, ಹುಣ್ಣಿಮೆಯ ವಿಶೇಷ ಸಂದರ್ಭದಲ್ಲಿ ಹವ್ಯಾಸಿ ಕಲಾವಿದರು ಅಭ್ಯಾಸಮಾಡಿ ಪ್ರದರ್ಶಿಸುತ್ತಿದ್ದರೆಂದು ತಿಳಿದುಬರುತ್ತದೆ. ಇಂತಹ ಒಂದು ಜಾತಿ ಇದ್ದು ಮುಂದೆ ೧೨ನೇ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ವೃತ್ತಿ ಕಲೆಯಾಗಿ ಮಾರ್ಪಟ್ಟಿರುವ ಸಾಧ್ಯತೆ ಇದೆ.

ಚೆನ್ನಬಸವಣ್ಣನವರ ವಚನದಲ್ಲಿ ಪಗರಣದ ಉಲ್ಲೇಖವಿದೆ.

"ಕೇಶಕಾಷಾಯಾಂಬರ ವೇಷ ಲಾಂಛನವಾದಡೇನೋ|

ಗ್ರಾಸಕ್ಕೆ ಭಾಜನರಲ್ಲದೆ ಲಿಂಗಕ್ಕೆ ಭಾಜನರಲ್ಲ

ಈ ಆಸೆಯ ವೇಷವ ಕಂಡಡೆ

ಕಾರಹುಣ್ಣಿಮೆಯ ಪಗರಣವೆಂಬೆ ಕಾಣಾ

ಕೂಡಲ ಚನ್ನಸಂಗಮದೇವಾ|"[೧೫]

ಈ ವಚನದ ಸಾಲನ್ನು ಆಧರಿಸಿ ನೋಡಿದಾಗ ಈ ವೇಷಗಳನ್ನು ವಿಶೇಷ ಸಂದರ್ಭದ ಹಬ್ಬ, ಹುಣ್ಣಿಮೆಗಳಲ್ಲಿ ಧರಿಸುತ್ತಿದ್ದರೆಂದು ಹೇಳಬಹುದು. ಅಲ್ಲದೆ ಈ ಕಲೆಯು ಹಾಸ್ಯಭರಿತವಾದುದೆಂದು ಕೂಡ ತಿಳಿದುಬರುತ್ತದೆ.

ಹಗಲುವೇಷಗಾರರ ಮೂಲದ ಬಗ್ಗೆ ಸ್ಪಷ್ಟವಾದ ಕುರುಹುಗಳು ೧೨ನೇ ಶತಮಾನದಲ್ಲಿ ಸಿಗುತ್ತವೆ. ವೇಷಗಾರರ ಬಗ್ಗೆ ಸಂಪೂರ್ಣವಾಗಿ ಬೆಳಕು ಚೆಲ್ಲುವುದು ೧೨ನೇ ಶತಮಾನದ ವಚನದಲ್ಲಿಯೇ ಎಂಬುದು ಸ್ಪಷ್ಟವಾಗುತ್ತದೆ. ಈ ಅಂಶವನ್ನು ಕೆಳಗಿನ ವಚನಗಳ ಮೂಲಕ ಗುರುತಿಸಲಾಗಿದೆ.

ಜೇಡರದಾಸಿಮಯ್ಯನ ವಚನದಲ್ಲಿ ಹಗಲುವೇಷಗಾರರ ಪ್ರಸ್ತಾಪವಿರುವುದನ್ನು ಕಾಣಬಹುದು.

"ವೇಷವ ಹೊತ್ತು ಹಿರಿಯರು ಈಶ್ವರ ಧ್ಯಾನದಲ್ಲಿರಬೇಕು
ವೇಷವ ತೋರಿ ಗ್ರಾಸಕ್ಕಾಗಿ ಆಸೆ ಮಾಡಿ
ಲೋಗರ ಮನೆಯ ಕಾದು
ಗ್ರಾಸವ ಪಡೆದು ಉದರವ ಹೊರುವ ವೇಷವು
ವೇಶಿಯಿಂದವು ಕರಕಷ್ಟ ಕಾಣಾ ರಾಮನಾಥ"[೧೬]

ಈ ವಚನದಿಂದ ತಿಳಿದುಬರುವುದೇನೆಂದರೆ ವೇಷವ ಧರಿಸಿದ ಭಕ್ತನ ಮನಸ್ಸು ಪರಿಶುದ್ಧವಾಗಿರಬೇಕು. ಹಣದ ಆಸೆಗಾಗಿ ವೇಷವನ್ನು ಧರಿಸಬಾರದು. ಹಣದ ಆಸೆಗಾಗಿ ಆಡುವ ವೇಷಗಾರರನ್ನು ವೇಶಿಗಿಂತಲೂ ಕನಿಕಷ್ಟ ಎಂದು ಡಾಂಭಿಕ ಭಕ್ತಿಯನ್ನು ತೆಗಳಿದ್ದಾನೆ. ಮತ್ತೊಂದೆಡೆ ಈ ರೀತಿ ಹೇಳಿದ್ದಾನೆ.

"ವೇಷವ ಕೂಡೆ ವಾಸಿಗೆ ಹೊರುವವನು ಈಶ್ವರದ್ರೋಹಿ
ವೇಷವ ಈಶ್ವರನೆಂದು ತಿಳಿಯದವ
ಪಾಶಕ್ಕೆ ಸಿಕ್ಕಿದ ಪಶುವಿನಂತೆ ಕಾಣಾ ರಾಮನಾಥ"[೧೭]

ಈ ವಚನ ಸಾಲನ್ನು ನೋಡಿದಾಗ ವೇಷಗಾರರೆ ಧರ್ಮದ ಪ್ರಚಾರಕ್ಕಾಗಿ ತೊಡಗಿದ್ದರೆಂದು ತಿಳಿದು ಬರುತ್ತದೆ. ವೈಷ್ಣವ ಧರ್ಮ ಪ್ರಚಾರದ ವೇಷಗಾರರು ಬೇರೆ, ವೀರಶೈವ ಧರ್ಮ ಪ್ರಚಾರದ ವೇಷಗಾರರು ಬೇರೆ ಇದ್ದರು ಎಂದು ತಿಳಿದುಬರುತ್ತದೆ. ಅದಕ್ಕಾಗಿಯೇ ದಾಸಿಮಯ್ಯನು ಈಶ್ವರ ಅಂದರೆ ಶೈವಮತ ಪ್ರಚಾರ ಮಾಡದ ವೇಷಗಾರ ಹಗ್ಗಕ್ಕೆ ಸಿಲುಕಿದ ಪಶುವಿನಂತೆ ಎಂದು ವಿಡಂಬಿಸಿದ್ದಾರೆ.

ಬಸವಣ್ಣನವರ ವಚನದಲ್ಲಿ ವೇಷಗಾರರನ್ನು ಕುರಿತು ಪ್ರಸ್ತಾಪವಿರುವುದನ್ನು ಕಾಣಬಹುದು.

"ವೇಷಾದಾರಿಯಾನು ಉದರ ಪೋಷಕ ನಾನಲ್ಲವಯ್ಯ

.................... ಕೂಡಲ ಸಂಗಮದೇವಾ"[೧೮]

ನಾನು ಹೊಟ್ಟೆಪಾಡಿಗಾಗಿ ವೇಷಧರಿಸಿದವನಲ್ಲ. ನಾನು ನಿಜವಾದ ವೇಷಧಾರಿ ನನ್ನಲ್ಲಿ ಡಾಂಭಿಕ ಭಕ್ತಿ ಇಲ್ಲ ನಾನು ಬಹಿರಂಗವಾಗಿ ಹೇಗೆ ಇದ್ದೆನೋ ಆತ್ಮದಲ್ಲಿ ಹಾಗೆ ಇದ್ದೆನೆ ಎಂದು ಹೇಳಿದ್ದಾನೆ. ಅಂದರೆ ಶೈವಧರ್ಮ ಮತ್ತು ವೈಷ್ಣವ ಧರ್ಮದ ಪ್ರಚಾರದಲ್ಲಿ ಎಷ್ಟೋಮಂದಿ ತೊಡಗಿದ್ದರೆಂದು ಸೂಚಿಸುತ್ತದೆ.

"ಧರೆಯ ಮೇಲೆ ಸುಳಿವ ವೇಷವ ಲಾಂಛನಧಾರಿಗಳೆಯ್ದೆ

ಹದಿನೆಂಟು ಜಾತಿಯ ಭಿಕ್ಷುವನುಂಡು ಕೆಟ್ಟರು"[೧೯]

ಅಂದರೆ ಭೂಮಿಯ ಮೇಲೆ ವೇಷ ಧರಿಸಿ ಒಡಾಡುವ ಶಿವನ ಭಕ್ತರು, ಕುಲ ಹದಿನೆಂಟು ಜಾತಿಯವರನ್ನು ಬೆರೆತು ಅವರ ಮಾತು ಕೇಳಿ ಕೆಟ್ಟರು. ಅವರ ತೋರಿಕೆಯ ಭಕ್ತಿ ಬೇರೆ ಮನದಾಳದಲ್ಲಿರುವ ಭಕ್ತಿಯೇ ಬೇರೆ ಎಂದು ಡಾಂಭಿಕ ಭಕ್ತರನ್ನು ವಿಡಂಬಿಸಿದ್ದಾನೆ.

"ತಂಬೂರಿ ಕಿನ್ನರಿ ಹಿಡಿದು ಮನೆ ಮನೆಯ ಬೇಡುವಾತ

ಹಲವು ವೇಷ ತೊಟ್ಟು ಆಡುವಾತ

ನಗಾರಿ ಸಮ್ಮೇಳ ಕರ್ಣ, ಕಹಳೆ, ಶಂಖ ಬಾರಿಸುವಾತ

ಅಷ್ಟಾವರಣ, ಪಂಚಚಾರದಲ್ಲಿ ಅಹಂಕರಿಸುವಾತ ಅನಾಚಾರಿ"[೨೦]

ವೇಷಗಾರರು ಯಾವ ಸಂಗೀತದ ವಾದ್ಯಗಳನ್ನು ಬಳಸುತ್ತಿದ್ದರೆಂದು ಈ ವಚನದಿಂದ ತಿಳಿದು ಬರುತ್ತದೆ. ಆದರೆ ವೇಷಗಾರರು ಶಂಖ ಊದುವುದಿಲ್ಲಾ ವೈಷ್ಣವರು ಈ ಶಂಖವನ್ನು ಊದುವುದು ಹೆಚ್ಚು ಕಂಡು ಬರುತ್ತದೆ.

ಕೆಲವೊಂದು ವಚನದಲ್ಲಿ ಬಹುರೂಪದ ಬಗ್ಗೆ ಉಲ್ಲೇಖವಿದೆ. ಬಹುರೂಪಿಗಳು ಸಹ ಇಡಿ ಭಾರತದಲ್ಲಿ ಇಂದಿಗೂ ವಾಸಿಸುತ್ತಿದ್ದು ಬಹುರೂಪಿಗಳಿಗೂ ಮತ್ತು ಬುಡಗ ಜಂಗಾಲರಿಗೂ ಕೆಲವು ವ್ಯತ್ಯಾಸಗಳನ್ನು ಗುರುತಿಸುತ್ತಾರೆ. ಬಹುರೂಪಿಗಳು ಹಾಸ್ಯಭರಿತವಾದಂತಹ ಸನ್ನಿವೇಶಗಳನ್ನು ಮಾತ್ರನಡಿಸುತ್ತಾರೆ. ಆದರೆ ಪ್ರಾಚೀನದಲ್ಲಿ ಇವರೆಲ್ಲ ಒಂದೇ ಆಗಿದ್ದರು ಎಂದು ತಿಳಿದು ಬರುತ್ತದೆ.

ಸುಲಿಯ ಚಂದಯ್ಯನ ವಚನದಲ್ಲಿ ಕಾಣಬಹುದು.

"ಗುರುವಾದಡೂ ಕಾಯಕದಿಂದಲೆ ಜೀವನ್ಮುಕ್ತಿ

ಲಿಂಗವಾದಡೂ ಕಾಯಕದಿಂದಲೇ ಶಿಲೆಯ ಕುಲ ಹರಿಯುವುದು

ಜಂಗಮವಾದಡೂ ಕಾಯಕದಿಂದಲೇ ವೇಷದ ಪಾಶವ ಹರಿವುದು

ಇದು ಚನ್ನಬಸವಣ್ಣ ಪ್ರಿಯ ಚಂದ್ರೇಶ್ವರಲಿಂಗದ ಅರಿವು"[೨೧]

ಈ ವಚನದಲ್ಲಿ ತಿಳಿದು ಬರುವುದೇನೆಂದರೆ ಕಾಯಕದಿಂದಲೇ ಡಾಂಭಿಕ ಭಕ್ತಿಯ ಕುರುಹುಗಳು ಹೊರಬಿಳುವುದು ಎಂದು ಹೇಳಿದ್ದಾರೆ. ಅಂದರೆ ಪ್ರತಿಯೊಂದಕ್ಕೂ ವೇಷಕ್ಕೆ ಹೊಲಿಸುವುದನ್ನೂ ನೋಡಿದರೆ ವೇಷಗಾರರ ಕಲೆ ಎಷ್ಟು ಪ್ರಸಿದ್ಧವಾಗಿತ್ತು ಎಂದು ತಿಳಿದು ಬರುತ್ತದೆ.

ಬಿಬ್ಬಿ ಬಾಚಯ್ಯನ ವಚನದಲ್ಲಿ ಈ ವೇಷಗಾರರ ಪ್ರಸ್ತಾಪ ಬಂದಿದೆ.

"ನಾನಾ ವೇಷವ ತೊಟ್ಟು ಆಡುವವನಂತೆ

ಬಹುರೂಪ ಬೇರಲ್ಲದೆ ಆಡುವ ತಾನೊಬ್ಬನೆ

ಎಲ್ಲೂ ಅರ್ಪಿತ ಮುಖ ಅಲ್ಲಿಯೂ ನೀನೆ

ಏಣಾಂಕಧರ ಸೋಮೇಶ್ವರ ಲಿಂಗವೇ"[೨೨]

ಇಲ್ಲಿ ಸ್ಪಷ್ಟವಾಗಿ ತಿಳಿದು ಬರುವುದೇನೆಂದರೆ ವೇಷಗಾರರು ಬಹುರೂಪಿಗಳು ಬೇರ ಬೇರೆ ಅಲ್ಲ, ಅವರಿಬ್ಬರು ಒಂದೇ ಎಂದು ಹೇಳಿದ್ದಾನೆ.

ಶಿವಶರಣರಲ್ಲಿ 'ಬಹುರೂಪಿ' ಎಂದು ಹೆಸರು ಪಡೆದ ಅಂಬಿಗರ ಚೌಡಯ್ಯನ ವಚನದಲ್ಲಿ ಬಹುರೂಪದ ಪ್ರಸ್ತಾಪವಿರುವುದನ್ನು ಕಾಣಬಹುದು.

"ಇಂದು ಬಂದ ಬಹುರೂಪವ ನೋಡಿರಯ್ಯ

ಗತಿಯ ಹೊದ್ದರೆ, ಮತಿಯ ಹೊದ್ದರೆ, ಸ್ಥಿತಿಯ ಹೊದ್ದರೆ

ಸ್ಥಾನವ ಹೊದ್ದರೆ ಐವರು ಕಟ್ಟಿದ ಕಟ್ಟಳೆಯ ಮೀರಿ

ನಾನಾಡುವ ಬಹುರೂಪವರೇ ಕಾಣ ಪ್ರಿಯನಾಗಿನಾಥ

ಬಸವಣ್ಣನಿಂದ ಬದುಕಿದೆ"[೨೩]

ಈ ವಚನದ ಸಾಲಿನಿಂದ ತಿಳಿದು ಬರುವುದೇನೆಂದರೆ ವೇಷಗಳನ್ನು ನೋಡಿರಿ ಕೆಲವರ ಮಾತುಗಳನ್ನು ಮೀರಿ ವೇಷಗಳನ್ನು ಆಡುತ್ತಿದ್ದೇನೆ. ಅದು ಬಸವಣ್ಣನವರ ಪ್ರಭಾವದಿಂದ ಶೈವಧರ್ಮವನ್ನು ಪ್ರಚಾರ ಮಾಡಲು ಎಂದು ಬಹುರೂಪಿ ಚೌಡಯ್ಯ ಹೇಳಿದ್ದಾನೆ.

"ಇನ್ನಾಡುವೆ ಜಂಗಮ ರೂಪ, ಅಲ್ಲಮನಂತೆ ಆಡುವೆ ಬಹುರೂಪ

ಅಜಗಣ್ಣನಂತೆ ಆಡುವೆ ಬಹುರೂಪ

ಮುಕವಾಡದಯ್ಯಗಳಂತೆ ಆಡುವೆ ಬಹುರೂಪ

ಪುರುಷಾಂಗಣದ ಮೆಟ್ಟಿ ಆಡುವೆ ಬಹುರೂಪ

ರೇಣುಕ ಪ್ರಿಯನಾಗಿನಾಥ ಬಸವನಿಂದ ಬದಕಿತೀ ಲೋಕವೆಲ್ಲಾ"[೨೪]

ಇವರ ವಚನಗಳೆಲ್ಲವೂ ಬಹುರೂಪದ ಕಾಯಕದಿಂದಲೇ ಶರಣರ ತತ್ವಗಳನ್ನು ಪ್ರಸಾರ ಮಾಡುತ್ತಿದ್ದುದಾಗಿ ಹೇಳಿದ್ದಾನೆ.

"ಎಂಬತ್ತುನಾಲ್ಕು ಲಕ್ಷ ಬಹುರೂಪವ ಚಂದ ಚಂದದಲ್ಲಿ ಆಡಿ

ಬಂಧುಗಳ ಮೆಚ್ಚಿಸ ಬಂದೇ

ಅವರು ಬಹುರೂಪದ ಚಂದವನರಿಯರು

ರೇಕಣ್ಣ ಪ್ರಿಯನಾಗಿ ನಾಥನಲ್ಲಿ

ಬಹುರೂಪದಿಂದ ವಿಚ್ಚಂದವಾಯಿತು"[೨೫]

ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳ ವೇಷವನ್ನು ಚಂದ ಚಂದದಲ್ಲಿ ಆಡಿ ತೋರಿಸಿ ಅವರನ್ನು ಮೆಚ್ಚಿಸಿದ ಅವರಿಗೆ ಬೇರೆ ಧರ್ಮದ ಸಾರ ಅರಿಯರು ನಾನು ಅವರಿಗೆ ಶೈವಧರ್ಮದ ಕುರುಹುಗಳನ್ನು ತಿಳಿಸಿದ್ದೇನೆ ಎನ್ನುವ ಅರ್ಥದಲ್ಲಿ ಹೇಳಿದ್ದಾನೆ. ಒಟ್ಟಿನಲ್ಲಿ ಇವರ ಜೀವವೇ ಬಹುರೂಪವಾಗಿದೆ. ಇಲ್ಲಿ ಬಹುರೂಪದ ಕಲೆ ಮತ್ತು ಬಹುರೂಪದ ಒಳತಿರಳು ತನ್ನ ಬಹುರೂಪ ಉರಿಯುವ ಕರ್ಪೂರದಂತೆ ಎಂದು ಹೇಳಿದ್ದಾನೆ.

ಕೆಲವೊಂದು ವಚನಗಳಲ್ಲಿ ಜಾತಿಗಾರರು ಎಂದು ಪ್ರಸ್ತಾಪವಿರುವುದನ್ನು ಕಾಣಬಹುದು. ಮಡಿವಾಳ ಮಾಚಿದೇವರ ವಚನದಲ್ಲಿ ಜಾತಿಗಾರರ ಪ್ರಸ್ತಾಪ ನೋಡಬಹುದು.

"ಮೂರು ಮೂರು ಜಡೆ ಗಡ್ಡಗಳ ಬಿಟ್ಟುಕೊಂಡು

ಡೊಂಬ ಜಾತಿಕಾರರಂತೆ ವೇಷವ ತೊಟ್ಟು

ಸಂಸ್ಕೃತಾದಿ ಪ್ರಾಕೃತಾಂತ್ಯಮಾದ ನಾನಾ ಶಾಸ್ತ್ರವ ಹೇಳಿ

ಸುಡುಗಾಡ ಸಿದ್ದಯ್ಯಗಳಂತೆ ಕುಟಿಲ ಕುರುಹುಯಂತ್ರ ತಂತ್ರಗಳ ಕಟ್ಟುತ

ಪುರಜನರ ಮೆಚ್ಚಿಸಬೇಕೆಂದು"[೨೬]

ಡೊಂಬ ಜಾತಿಕಾರರದು ಅಣುಕ ಮನೋರಂಜನೆ ರೂಪದ ಅಭಿನಯ ಇಂತಹ ಕೃತಕವಾದಂತಹ ಭಕ್ತಿಯನ್ನು ವಿಡಂಬಿಸಲು ಮೂರು ಮೂರು ಜಡೆ ಗಡ್ಡ ಬಿಟ್ಟುಕೊಂಡು, ಡೊಂಬ ಜಾತಿಯ ವೇಷಹಾಕಿ ಸಂಸ್ಕೃತಿ ಪ್ರಾಕೃತ ನಾನಾಶಾಸ್ತ್ರವ ಹೇಳಿ ಸುಡುಗಾಡು ಸಿದ್ದಯ್ಯಗಳಂತೆ ಯಂತ್ರ ಮಂತ್ರ ಕಟ್ಟಿ ಪುರಜನರನ್ನು ಮೆಚ್ಚಿಸುತ್ತ ಹೋದಂತೆ ಎಂದು ಡಾಂಭಿಕ ಭಕ್ತಿಯನ್ನು ಚಿತ್ರಿಸಿದ್ದಾನೆ. ಬಿಂಗೇರ ಎನಿಸಿಕೊಂಡ ವೇಷಗಾರರು ಭೃಂಗಿವಂಶ ಎನ್ನುವುದಕ್ಕೆ ವೇಷಗಾರರ ವೇಷಗಳ ಹೋಲಿಕೆ ಇರುವ ಭೃಂಗಿಯ ನೃತ್ಯದ ಬಗ್ಗೆ ಹರಿಹರನ ರಗಳೆಯಲ್ಲಿ ಪ್ರಸ್ತಾಪಗೊಂಡಿದೆ.

> "ಇರಲೊಪ್ಪಿತು ಭೃಂಗಿಯ ಶೃಂಗಾರಮಂ
> ಸಿರಮಧ್ಯದ ಲಿಂಗದ ವಿಸ್ತಾರ
> ಬಾಳಂ ತೀವಿದ ಬಸಿತದ ತಿಳಕಂ
> ತಾಳಕ್ಕೊಲೆದಾಡುವ ಕೈಚಳಕಂ
> ಫಣಿಕುಂಡಲ ಮುತ್ತಿನ ಹಾರಂಗಳ
> ಮಣಿ ಖಚಿತದ ರತ್ನದ ಮುದ್ರಿಕೆಗಳ
> ಕೈಯ್ಯಾರಂ ಹೊಸ ವಜ್ರದ ಕಂಕಣ
> ಬಯ್ಯಾರಂ ಮಿಣಿಗೆಜ್ಜೆಯ ಚಲ್ಲಗಂ
> ವೆಸೆಯಲ್ ಸರ್ವಾಂಗದ ಬಿಸಿತಂ
> ಮಸಗಲ್ ಕಾಲ್ತೊಡರು ಝುಣಝುಣಿತಂ
> ಕೆಯ್ಯಾಳಗೊಪ್ಪಲ್ ನರ್ತನ ದಂಡಂ
> ಮೆಯ್ಯಾಳ್ ಸರ್ವಾಂಗದೊಳೆ ಸುಗತಿಗಳ್
> ಬೆಳೆಯಲ್ ತ್ರಿಭಂಗಿ ಗೊಂಡಾಕೃತಿಗಳ
> ಮುಂದುವರಿಯೇ ಮೆಚ್ಚುಗಳೋಲಗದೊಳ್"[೨೭]

ಭೃಂಗಿಯು ಶಿವಪಾರ್ವತಿಯ ಮುಂದೆ ಅಲಂಕರಿಸಿಕೊಂಡು ದಿನನಿತ್ಯ ವೈವಿಧ್ಯಮಯ ವೇಷಗಳಿಂದ ಸಂತೃಪ್ತಿಪಡಿಸುತ್ತಿದ್ದನು ಎಂದು ಹೇಳಿದ್ದಾನೆ. ಆ ಅಲಂಕಾರವನ್ನು ನೋಡಿದರೆ ಹರಿಹರನು ವೇಷಗಾರ ವೇಷಗಳನ್ನು ಕಣ್ಣಾರೆ ಕಂಡಿರುವಂತೆ ತೋರುತ್ತದೆ. ಈ ಸಂದರ್ಭದಲ್ಲಿಯೂ ವೇಷಗಳನ್ನು ಹೊತ್ತು ಧರ್ಮ ಪ್ರಚಾರ ಬರದಿಂದ ಸಾಗಿತ್ತು ಎಂದು ಹೇಳಬಹುದು. ಇದರಿಂದ ಈ ಜನತೆಯ ಹೇಳುವ ಭೃಂಗಿಯು ಪೌರಾಣಿಕತೆಯು ಸತ್ಯಕ್ಕೆ ಪುಷ್ಠಿ ನೀಡುತ್ತದೆ.

ಡಾ. ಬಸವರಾಜ ಮಲಶೆಟ್ಟಿಯವರು 'ಉತ್ತರ ಕರ್ನಾಟಕದ ಬಯಲಾಟಗಳು' ಎಂಬ ಕೃತಿಯಲ್ಲಿ ವೇಷಗಾರರು ಬಹುರೂಪಿಗಳು ಬೇರೆ ಬೇರೆ ಎಂದು ಹೇಳಿದ್ದಾರೆ ಹೊರನೋಟಕ್ಕೆ ವೇಷಗಾರರು ಮತ್ತು ಬಹುರೂಪಿಗಳು ಒಂದೇ ವೃತ್ತಿಯವರಾಗಿ ಕಂಡರೂ, ಅವರಿಬ್ಬರ ವೃತ್ತಿ ಪರಂಪರೆಗಳಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ಕರ್ನಾಟಕದಲ್ಲಿ ಒಂದು ಕಾಲಕ್ಕೆ ಸಾಕಷ್ಟು ಪ್ರಮಾಣದಲ್ಲಿದ್ದ ಬಹುರೂಪಿಗಳು ವೇಷಗಾರರಷ್ಟು ಸಾಧಾರಣ ವರ್ಗದವರಲ್ಲ ಇಂದು ಬಹುರೂಪಿಗಳು ತಮ್ಮ ವೃತ್ತಿ ವೈಶಿಷ್ಟ್ಯಗಳನ್ನು ಕಳೆದುಕೊಂಡು ವೇಷಗಾರರ ಸಂಪ್ರದಾಯದಲ್ಲಿ ಬೆರೆತಿರುವ ಸಾಧ್ಯತೆ ಇದೆ ಎಂದು ಹೇಳಿದ್ದಾರೆ.[೨೮] ಆದರೆ ಈ ಹಿಂದೆ ಎಲ್ಲಾ ಸಾಹಿತ್ಯವನ್ನು ಅವಲೋಕಿಸಿದಾಗ ಪ್ರಾದೇಶಿಕವಾಗಿ ಕಾಲಮಾನಕ್ಕೆ ತಕ್ಕಂತೆ ಕರೆದಿರಬಹುದಾದ ಪರ್ಯಾಯ ನಾಮಗಳೆ ಹೊರತು ಬಹುರೂಪಿಗಳು-ವೇಷಗಾರರು ಬೇರೆ ಬೇರೆ ಅಲ್ಲ ಎಂದಿದ್ದಾರೆ. ಕರ್ನಾಟಕ ಜಾನಪದ ವಿಶ್ವಕೋಶದಲ್ಲಿ ಬಹುರೂಪಿಗಳು ಮತ್ತು ಬುರ್ರಾಕಥೆಗಾರರು ಎಂಬ ಶೀರ್ಷಿಕೆಯ ಲೇಖನವು ವೇಷಗಾರರು ಅಲೆಮಾರಿ ಬುಡಕಟ್ಟಿನ ಇವರನ್ನು ವೇಷಗಾರರೆಂತಲೂ ಕರೆಯುತ್ತಾರೆ. ಇವರು ವೇಷಭೂಷಣ ಮತ್ತು ಸಂಗೀತವಾದ್ಯಗಳನ್ನು ಹೇಗೆ ತಯಾರಿಸಿಕೊಳ್ಳುತ್ತಾರೆ ಎಂಬುದನ್ನು ತಿಳಿಸುತ್ತದೆ.

ಡಾ. ಎಚ್.ಟಿ. ಪೋತೆಯವರು 'ಹೈದರಾಬಾದ್-ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು' ಎನ್ನುವ ಹೊತ್ತಿಗೆಯಲ್ಲಿ ವೇಷಗಾರರನ್ನು ಭೈರೂಪಿಗಳು, ಜಾತಿಕಾರರು, ರಂಜಕರು, ಸೋಗುಗಾರರು, ಬಹುರೂಪಿಗಳು ಎಂದು ಗುರುತಿಸಿ ಸನ್ನಿವೇಶಕ್ಕೆ ತಕ್ಕಂತೆ ವೇಷಗಳನ್ನು ಹಾಕುತ್ತಾ ಊರಿಂದ ಊರಿಗೆ ಅಲೆದು ತಮ್ಮ ಕಲಾ ಚಾತುರ್ಯದಿಂದ ಜನಮನವನ್ನು ರಂಜಿಸಿ ಉಪಜೀವನ ಮಾಡುವ ಒಂದು ಕಲಾವಿದರ ಗುಂಪು ಎಂದು ಹೇಳಿದ್ದಾರೆ.[೨೯]

### ಲೇಖನಗಳು

ಈಗಾಗಲೇ ದೇಶ ವಿದೇಶಗಳ ವಿದ್ವಾಂಸರು ಬಹಳಷ್ಟು ಬುಡಕಟ್ಟುಗಳ ಬಗ್ಗೆ ಅಧ್ಯಯನ ಮಾಡಿ ಕೆಲವೊಂದು ಅಂಶಗಳನ್ನು ದಾಖಲಿಸಿದ್ದಾರೆ. ಈ ಅಂಶಗಳ ಆಧಾರದಿಂದ ನಮಗೆ ಬುಡಕಟ್ಟು ಸಂಸ್ಕೃತಿಗಳು ಬೆಳೆದು ಬಂದ ದಾರಿಯನ್ನು ಅಭ್ಯಾಸಿಸಲು ಸಾಧ್ಯವಾಗುತ್ತದೆ. ಹಗಲುವೇಷಗಾರರ ಬಗ್ಗೆ ಹಲವು ವಿದ್ವಾಂಸರು ತಮ್ಮ ಹೇಳಿಕೆಗಳನ್ನು ವ್ಯಕ್ತಪಡಿಸಿದ್ದಾರೆ. ಎಡ್ಗರ್‌ಥರ್ಸ್ಟನ್ ಅವರು ಹಗಲುವೇಷಗಾರರನ್ನು ಕುರಿತು (pagathi vesham) 'A class of Telugu beggers who put in disguises (vesham) while begging at the anmeal festival at thirupathi in honour of the godess Gangamma custom requires. The people to appear in a different disguise. every morning and evening these disguises include those of a Bairagi, Serpent, etc.,[೩೦] ಹಗಲುವೇಷಗಾರರು ತೆಲುಗು ಭಿಕ್ಷುಕ ಜನವರ್ಗ ಯಾವಾಗ ಭಿಕ್ಷೆ ಬೇಡಬೇಕೋ ಆಗ ಏನು ವೇಷ ಹಾಕಬೇಕೆಂದು ಚರ್ಚಿಸುತ್ತಾರೆ. ತಿರುಪತಿಯಲ್ಲಿ ನಡೆಯುವ ವಾರ್ಷಿಕ ಉತ್ಸವದಲ್ಲಿ

ಮುಂಜಾನೆಯಿಂದ ಸಾಯಂಕಾಲದವರೆಗೆ ವಿಧವಿಧ ಪದ್ಧತಿಯಲ್ಲಿ ವೇಷಗಳನ್ನು ಧರಿಸಿ ತೋರಿಸುತ್ತಿದ್ದರು. ಅವರಲ್ಲಿ ಭೈರಾಗಿ ಮತ್ತು ಸರ್ಪ ವೇಷಧಾರಿಗಳು ಸೇರಿದ್ದರು ಎಂದು ಹಗಲುವೇಷಗಾರರನ್ನು ಸೂಚಿಸಿದ್ದಾರೆ. ಅಂದರೆ ಹೊಟ್ಟೆಪಾಡಿಗಾಗಿ ಜಾತ್ರೆ ಉತ್ಸವಗಳಲ್ಲಿ ವಿಧವಿಧದ ವೇಷಗಳನ್ನು ಧರಿಸುತ್ತಿದ್ದರೆಂದು ತಿಳಿದುಬರುತ್ತದೆ.

ಶ್ರೀ ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅನಂತಕೃಷ್ಣ ಅಯ್ಯರ್‌ರವರು ತಮ್ಮ "The Mysore Tribes and Castes" ಎಂಬ ಗ್ರಂಥದಲ್ಲಿ ವೇಷಗಾರರನ್ನು ಜಂಗಾಲು ಎಂದು ಗುರುತಿಸಿ "Jangale (low caste) Jangalu is the Telugu word for Kandrada, jangulu in the Tamilu countries. They are called Jangam Ardies and in religion. The jangalas are saivas the jangalas are orginally beggers"[೩೦] ಜಂಗಾಲು ಎಂಬ ಶಬ್ದ ತೆಲುಗು. ಅದು ಕನ್ನಡದಿಂದ ಬಂದಿದೆ. ತಮಿಳು ದೇಶದಲ್ಲಿ ಆಂಧ್ರ ಜಂಗಮರು ಎಂದು ಕರೆಯುತ್ತಾರೆ. ಜಂಗಮರು ಶೈವರು, ಜಂಗಾಲರೇ ನಿಜವಾದ ಭಿಕ್ಷುಕರು ಎಂದು ಹೇಳಿಕೆ ನೀಡಿದ್ದಾರೆ. ಅಂದರೆ ಈ ಸಮುದಾಯವು ವೀರಶೈವ ಜಂಗಮರಿಗಿಂತ ಕೆಳ ಹಂತದ ಭಿಕ್ಷುಕ ವರ್ಗ ಎಂದು ತಿಳಿದುಬರುತ್ತದೆ.

'Belgaum district Gazetter of India'ದಲ್ಲಿ ಬಹುರೂಪಿಗಳು ಅಥವಾ ಹಗಲುವೇಷಗಾರರನ್ನು ಈ ರೀತಿ ಗುರುತಿಸಿದ್ದಾರೆ.

Baharupigalu or veshagararu who are wanderers are found in vakkund, arabhvi and other villages of the district originally they seem to be shaivas by faith, thery end horses and cows they are divided into exogamous bedagas tera is in practice,. Brahmins officiate in marraiges widow marraige is allowed the children learn the trade of art at the age of eight years for which in initiation ceremony is celeberated the dead are baried they are strolling actors enact drama."[೩೧] ಮೂಲತಃ ವೇಷಗಾರರು ಅಥವಾ ಬಹುರೂಪಿಗಳು ಶೈವರು ಇವರು ತಮ್ಮನ್ನು ಬೆಡಗುಗಳಿಂದ ಗುರುತಿಸಿಕೊಳ್ಳುತ್ತಾರೆ. ಹೆಣ್ಣನ್ನು ವರಿಸುವಾಗ 'ತೆರ' ಕೊಡುವ ಪದ್ಧತಿ ಇದೆ. ವಿಧವಾ ವಿವಾಹ ಪದ್ಧತಿ ಇದೆ. ಬ್ರಾಹ್ಮಣರ ಹಾಗೆ ಮದುವೆಯಲ್ಲಿ ಇವರೇ ಪೌರೋಹಿತ್ಯವಹಿಸುತ್ತಾರೆ. ಎಂಟು ವರ್ಷದ ವಯಸ್ಸಿರುವಾಗಲೇ ಇವರ ಮಕ್ಕಳು ಈ ವೇಷಗಾರಿಕೆಯ ಕಲೆಯಲ್ಲಿ ಭಾಗವಹಿಸಿ ಕಲಿಯುತ್ತಾರೆ. ಸತ್ತವರನ್ನು ಊಳುವ ಪದ್ಧತಿ ಇವರ ಸಮುದಾಯದಲ್ಲಿದೆ. ಇವರು ಅದ್ಭುತವಾದ ಕಲಾ ಪ್ರದರ್ಶನದಿಂದ ಜನರಿಂದ ಮೆಚ್ಚುಗೆ ಪಡೆಯುತ್ತಾರೆ ಎಂದು ಈ ಸಮುದಾಯವನ್ನು ಗುರುತಿಸಲಾಗಿದೆ.

ಕೆ.ಎಸ್. ಸಿಂಗ್ ಅವರು ತಮ್ಮ 'The Scheduled Casts' ಎನ್ನುವ ಗ್ರಂಥದಲ್ಲಿ ಈ ಸಮುದಾಯವನ್ನು ಕುರಿತು ಹೀಗೆ ಹೇಳಿದ್ದಾರೆ. "The Budiga Jangam and the beda jangam

they are distributed in coastal Andhra and the Royalseema and a Telangana regions of Andhra Pradesh they are notified as a Beda Jangam and the Budga jangam they speak in Telugu. The Budga jangams are non-regetarions alcoholic drinks are consumed they have different surnames like gandham Bhoota, Toorapati, posthamvallu, Kallenmvallu. These surnames regulate marriage alliances. The Kulapedda officiates at the marriage proceedings. They are mainly a landless community Budaga jangams are Hindu their caste leaders (kulapeddalu) function as priestes and perform the birth, marriage and death rituals they are expert in mat weaving. Their folk-songs and folk-tales are partly community-specific folke-songs are sung by both men and women. They use percussion musical in struments."[33] ಬುಡುಗ ಜಂಗಮ ಅಥವಾ ಬೇಡ ಜಂಗಮರು ಆಂಧ್ರಪ್ರದೇಶದ ಕರಾವಳಿ ಆಂಧ್ರ ಮತ್ತು ರಾಯಲುಸೀಮೆಯ ತೆಲಂಗಾಣಗಳಲ್ಲಿ ಚದುರಿದ್ದಾರೆ. ಇವರನ್ನು ಬೇಡ ಜಂಗಮ ಮತ್ತು ಬುಡುಗ ಜಂಗಮ ಹೆಸರಿನಿಂದ ಗುರುತಿಸಿದ್ದಾರೆ. ತೆಲುಗು ಭಾಷೆ ಮಾತನಾಡುತ್ತಾರೆ. ಮಾಂಸಹಾರಿಗಳು ಮದ್ಯಪಾನಿಗಳು ಅಂತಹ ಬಳ್ಳಿಗಳೆಂದರೆ ಗಂಧಂ, ಭೂಪಂ, ತೂರಪತಿ, ವಸ್ತಮೊಳ್ಳು, ಕಲ್ಯಾಣಮೊಳ್ಳು, ಮುಗ್ಗೊಳ್ಳು, ತಿರುಪಾಟಿ ಬೈಲು ವಾಡೊಳ್ಳು ಮುಂತಾದವುಗಳು. ಇವರಲ್ಲಿ ಮದುವೆಯ ವಯಸ್ಸು ಹುಡುಗನಿಗೆ ಸುಮಾರು ೨೦, ಹುಡುಗಿಯ ವಯಸ್ಸು ೧೪ ಎಂದು ಕರೆಯುತ್ತಾರೆ. ನ್ಯಾಯ ಪಂಚಾಯಿತಿ ಎಲ್ಲವೂ ಇವರ ಸಮ್ಮುಖದಲ್ಲಿ ಜರುಗುತ್ತವೆ. ಈ ಸಮುದಾಯಕ್ಕೆ ಯಾವುದೇ ತರಹದ ಸ್ಥಿರ ಆಸ್ತಿಗಳಿಲ್ಲ. ಇವರು ಹಿಂದೂ ಪದ್ಧತಿಗಳನ್ನು ಆಚರಿಸುತ್ತಾರೆ. ವೃತ್ತಿ ಚಾಪೆ ಎಣೆಯುವುದು ಮತ್ತು ಹೆಣ್ಣು ಮಕ್ಕಳು, ಹುಡುಗರು ಜನಪದ ಗೀತೆಗಳನ್ನು ಹಾಡುತ್ತಾ ಭಿಕ್ಷೆ ಬೇಡುತ್ತಾರೆ ಎಂದು ಹೇಳಿ ಇವರು ಸಮಾಜದ ಅತ್ಯಂತ ಹಿಂದುಳಿದ ಜನಾಂಗವಾಗಿದ್ದು, ಸರಕಾರ ಇವರಿಗೆ ಸಾಮಾಜಿಕ ಸೌಲಭ್ಯ ನೀಡಬಹುದೆಂದು ಸೂಚಿಸಿದ್ದಾರೆ.

ಕೆ.ಎಂ. ಮೈತ್ರಿಯವರು ತಮ್ಮ 'Cast certificate problems of Budga jangams' ಎಂಬ ಲೇಖನದಲ್ಲಿ ಈ ಸಮುದಾಯವನ್ನು ಕುರಿತು 'Now they are famous as Hgalu veshagararu. The term beda is the symbol of hunting stage the initial hunters are budas. budas become budgas. The meaning of buda is root, stort, oborigin clan etc., But in Rev. Kettels Dictionary it means Damaru. It is the musical instrument of lord shiva. The early hunters (Budas) later used the damaru and then dimki for worshipping their deities the tern beda and buda are derived from Kannada language. So Beda or Budga Jangams are originally kannadigas. Their nomadic

condition helps them tolearn. Telugu (Dravidian language) of or their living. It become their mother tangue and till then they had their own Budga language. But it is missing it status slowly"[೩೪] ಹಗಲುವೇಷಗಾರರೆಂದೆ ಪ್ರಸಿದ್ಧಿ ಹೊಂದಿದ ಇವರ ಮೂಲ ಬೇಡ ಎನ್ನುವುದು ಬೇಟೆಯ ಚರಮಸ್ಥಿತಿಯನ್ನು ಸೂಚಿಸುತ್ತದೆ. ಪ್ರಸಿದ್ಧ ಬೇಟೆಗಾರರೆಲ್ಲ ಬುಡದವರು. ಬುಡ ಅಂದರೆ ಬುಡುಗರು ಎಂದು, ಬುಡ ಎಂದರೆ ಮೂಲ, ಬೇರು ಮುಂತಾದ ಅರ್ಥವಿದೆ. ಡಾ. ಕಿಟೇಲ್ ಅವರ ಅರ್ಥಕೋಶದಲ್ಲಿ ಬುಡ ಎಂದರೆ 'ಡಮರು' ಇದು ಒಂದು ಸಂಗೀತ ಸಾಧನ. ಶಿವನು ಬಳಸುವ ಇಂತಹ ಡಮರನ್ನು ಈ ವೇಷಗಾರರು 'ಡಿಮಿಕಿ' ಎಂದು ತಮ್ಮ ನಿತ್ಯ ಕಾಯಕಕ್ಕೆ ಬಳಸುತ್ತಾರೆ. ಬೇಡ ಬುಡ ಎನ್ನುವ ಶಬ್ದಗಳು ಕನ್ನಡದಿಂದ ಹುಟ್ಟಿದ ಶಬ್ದಗಳು ಆದಕಾರಣ ಅವರು ಮೂಲತಃ ಕನ್ನಡಿಗರು. ಅವರ ಅಲೆಮಾರಿ ಬದುಕಿಗೆ ಈ ಬಗೆಯ ಭಾಷಾ ಕಲಿಕೆ ಅನಿವಾರ್ಯವೂ ಹೌದು. ತೆಲುಗು ಭಾಷಿಕ ಪರಿಸರದಲ್ಲಿ ಇವರು ಹೆಚ್ಚಾಗಿ ವಾಸಿಸುತ್ತಿರುವುದರಿಂದ ತೆಲುಗು ಮನೆ ಭಾಷೆಯಾಗಿದೆ. ಆದರೂ ಅವರು ತಮ್ಮದೆ ಆದ ಬುಡುಗ ಭಾಷೆಯನ್ನು ಹೊಂದಿದ್ದರೂ ಅದರ ಬಳಕೆ ಕಡಿಮೆಯಾಗುತ್ತದೆ ಎಂದು ಹೇಳಿದ್ದಾರೆ.

ಡಾ.ಎಂ.ಎಂ. ಕಲಬುರ್ಗಿಯವರು ಜನಪದ ಸಾಹಿತ್ಯ ದರ್ಶನ ಭಾಗ-೬ರಲ್ಲಿ ವೇಷಗಾರರನ್ನು ಕುರಿತು ಬಹಳ ಸ್ಪಷ್ಟವಾದ ಬೆಳಕು ನೀಡುವಂತಹ ಅಧ್ಯಯನ ನಡೆಸಿದ್ದಾರೆ. ಇವರಿಗೆ ಬಹುರೂಪಿಗಳು, ವೇಷಧಾರಿ, ಜಾತಿಗಾರ, ಜಾತಿಡಂಬ ಎಂದು ಕೆಲವು ಜನಪದ ಕಲೆಗಾರರಂತೆ ವೇಷಗಾರರ ಮೂಲಸ್ಥಾನವು ಆಂಧ್ರಪ್ರದೇಶ. ಇಂದಿನ ಬಹುರೂಪಿಗಳ ವೇಷಗಾರಿಕೆ ಪ್ರಾಚೀನ ಕಾವ್ಯಗಳು ಉಲ್ಲೇಖಿಸಿರುವ 'ಪಗರಣ' ವರ್ಗಕ್ಕೆ ಸೇರುತ್ತದೆ ಎಂದಿದ್ದಾರೆ.[೩೫]

**ಶಾಸನಗಳು**

ಈ ಸಮುದಾಯದ ಬಗ್ಗೆ ಅಲ್ಪಮಟ್ಟಿನ ಶಾಸನಗಳು ಲಭ್ಯವಾಗಿವೆ. ಪಟ್ಟದಕಲ್ಲಿನ ಶಿಲಾಶಾಸನವೊಂದು ಹೀಗೆ ತಿಳಿಸುತ್ತದೆ.

> "ವಿಜಯಾದಿತ್ಯ ಭಟರರಾ ಗಾನ್ಪರ್ವರ್ಣಿನಿರಸಿದ ಪೂರ್ವ ಮರ್ಯಾದೆಗಳಾನ್
> ಶ್ರೀ ವಿಕ್ರಮಾದಿತ್ಯ ಭಟಾರರಾ ಲೋಕಮಹಾದೇವಿಯರ್ ಗಾನ್ಪರ್ವ್ವರ್ಗೆನಿತ್ತರ
> ಇದಾನಳಿವೊಸ್ ಕೊನ್ಪಲೋಕಕ್ಕೆ ಸನ್ರೋನಕ್ಕು ಎರೆಯಿಡಿ ಶ್ರೀಗುಪ್ತ ದುಗ್ಗಡಿ ದುಗ್ಗಮಾರ
> ಇದಾ ಪಡೆದೋರ್"[೩೬] ಎಂದಿದೆ.

ಈ ಶಾಸನದ ಪ್ರಕಾರ ಗಾಂಧರ್ವರು ವೇಷಗಾರರೆಂದು ಅಭಿಪ್ರಾಯಪಡಲಾಗಿದೆ. ಪಗರಣಿಗರ ಕಲೆ,

ಅಭಿವ್ಯಕ್ತಿ, ಭಾಷಾ ಚಾತುರ್ಯ ಮುಂತಾದವುಗಳನ್ನು ಗಮನಿಸಿದಾಗ ವೇಷಗಾರರ ಜನಾಂಗದ ಉಲ್ಲೇಖಗಳ ಮೂಲಕ ಅವರ ಚರಿತ್ರೆಯನ್ನು ಕಂಡುಕೊಳ್ಳಬಹುದು. ಆದರೆ ಈ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ಪಗರಣದ ಕುರಿತು ಕ್ರಿ.ಶ. ೧೦೦೭ರ ಲಕ್ಕುಂಡಿ ಶಾಸನವು ಈ ರೀತಿ ಹೇಳುತ್ತದೆ.

"ಪಗರಣಂ ಅಣ್ಮು, ಮೆಚ್ಚು ಪನಿ, ಘೃಷ್ಟಿಯೇ ಬೂದಿಯ ಬೊಟ್ಟುಗಂಡವಾ|
ತುಱುಗಿಬಗಿ, ಕೀರ್ತಿ ಕುಪ್ಪೆಕುಚೆ, ಮುತ್ತರ ಮೂದಲೆ ಪೆಂಪು, ವಿಕ್ರಮಂ|
ಭಗವತಿಯ ಏಱು, ಶೌಚಗುಣಂ ಅತ್ತಿಯ ಪಣ್ ಎನಿಪ ಏಳಪುಂಡರಂ
ತೆಗಳ್ವುದು ಉದಾರ ಚಾರುಚರಿತ ಪ್ರಭೆಯಿಂ ಪಡೆವಳ್ಳ ತೈಲನ"[೨೭]

ಈ ಶಾಸನದಿಂದ ತಿಳಿದುಬರುವುದೆನೆಂದರೆ ಸಾಮಾನ್ಯರ, ದುಷ್ಟರ ಶೌರ್ಯವೆಲ್ಲವೂ ಕೇವಲ ಪಗರಣವಿದ್ದಂತೆ ಅಂದರೆ ಅವೆಲ್ಲವೂ ಏನಿದ್ದರೂ ನಟನೆ, ತೋರಿಕೆ, ತಿರುಳಿಲ್ಲದ ಅಬ್ಬರ ಎಂಬುದು ಪದ್ಯದ ಅರ್ಥ ನೀಡುತ್ತದೆ. ಎಂದರೆ ಪಗರಣ ಮಾತಿಗೆ ಹೀನಾರ್ಥವು ಕ್ರಿ.ಶ. ೧೦೦೭ರ ಕಾಲಕ್ಕೆ ಪ್ರಾಪ್ತವಾಗಿತ್ತೆಂದು ತಿಳಿದುಬರುತ್ತದೆ. ತರುವಾಯ ಹಾಸ್ಯಾಸ್ಪದವಾದ ಜಗಳ, ಗಲಾಟೆ ಎಂಬರ್ಥಗಳು ಬೆಳಕಿಗೆ ಬಂದಂತೆ ಕಾಣುತ್ತದೆ. ಅಂದು ಕೂಡ ಪಗರಣಿಗರು ಹಾಸ್ಯಸ್ಪದ ವೇಷಗಳನ್ನು ಹಾಕುತ್ತಿದ್ದರೆಂದು ತಿಳಿದು ಬರುತ್ತದೆ. ಈ ರೀತಿಯಾಗಿ ಹಗಲುವೇಷಗಾರರ ವೃತ್ತಿ ಬದುಕಿನ ವಿವಿಧ ಆಯಾಮಗಳನ್ನು ಸಾಹಿತ್ಯ ಹಾಗೂ ಶಾಸನಗಳ ಮುಖಾಂತರ ತಿಳಿದುಕೊಳ್ಳುವುದರ ಜೊತೆಗೆ ಅವರ ಚರಿತ್ರೆಯನ್ನು ಕಂಡುಕೊಳ್ಳಬಹುದು.

**ವಲಸೆ**

ಮೂಲತಃ ಆಂಧ್ರಪ್ರದೇಶದ ಗುಡ್ನಗಾಡು-ತಪ್ಪಲು ಪ್ರದೇಶಗಳಲ್ಲಿ ವಾಸ ಮಾಡಿಕೊಂಡಿದ್ದ ಹಗಲುವೇಷಗಾರ ಸಮುದಾಯವೂ ಹಲವು ಶತಮಾನ ಕಳೆಯುತ್ತಿದ್ದಂತೆ ಜನಸಂಖ್ಯೆ ಹೆಚ್ಚಾಗಿ ಆಹಾರದ ಕೊರತೆ ಮತ್ತು ನೈಸರ್ಗಿಕ ವಿಕೋಪಕ್ಕೆ ತುತ್ತಾಗಿ ಜೀವನೋಪಾಯಕ್ಕೆ ಬೇರೆ ದಾರಿ ಇಲ್ಲದೆ ಆಂಧ್ರದ ಹಲವು ಪ್ರದೇಶಗಳಾದ ಗದ್ವಾಲ್, ಮಹಿಬೂಬನಗರ, ವನಪರ್ತಿ, ಅನಂತಪುರ, ಕರಿಂನಗರ, ರಂಗಾರೆಡ್ಡಿ ಜಿಲ್ಲೆ, ಕರ್ನೂಲ್, ಶ್ರೀಶೈಲ ಮೊದಲಾದ ಪ್ರದೇಶಗಳಲ್ಲಿ ಪ್ರಸಾರಗೊಂಡು ತರುವಾಯ ಉದ್ಯೋಗ ದೊರೆಯದೆ ನೆರೆಯ ರಾಜ್ಯಗಳಾದ ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು ಮೊದಲಾದ ರಾಜ್ಯಗಳಿಗೆ ವಲಸೆಗೊಂಡಿದ್ದಾರೆ. ಈ ಸಮುದಾಯವು ಕರ್ನಾಟಕಕ್ಕೆ ಬರಲು ಅನುಕೂಲಕರವಾದ ರೈಲ್ವೆ ವ್ಯವಸ್ಥೆ ಹಾಗು ಸಾರಿಗೆ ವ್ಯವಸ್ಥೆ ಕಾರಣವಾಗಿದೆ. ಈ ಸಮುದಾಯವು ಕರ್ನಾಟಕಕ್ಕೆ ಪಶ್ಚಿಮ ಆಂಧ್ರದಿಂದ ವಲಸೆ ಬಂದಿದ್ದಾರೆ ಎನ್ನಬಹುದು. ರಾಯಚೂರು ಆಂಧ್ರದ ಗಡಿ ಪ್ರದೇಶವಾಗಿರುವುದರಿಂದ ಮಹಿಬೂಬ

ನಗರದಿಂದ ರಾಯಚೂರು, ಬಾಗಲಕೋಟೆ, ಬೆಳಗಾಂ, ಚಿತ್ರದುರ್ಗ ಮೊದಲಾದ ಜಿಲ್ಲೆಗಳಿಗೆ ವಲಸೆಗೊಂಡಿದ್ದಾರೆ. ರಾಯಚೂರಿಗೆ ವಲಸೆಗೊಂಡ ಈ ಸಮುದಾಯ ಕ್ರಮೇಣವಾಗಿ ದೇವದುರ್ಗ, ಲಿಂಗಸೂಗುರು, ಸಿಂಧನೂರು, ಮಾನ್ವಿ ತಾಲೂಕಗಳಿಗೆ ಪ್ರಸಾರಗೊಂಡಿದ್ದಾರೆ.

ದಿನಾಂಕ ೧೪.೨.೦೪ರಂದು ನಾಗಪ್ಪ ಎನ್ನುವ ಗಬ್ಬೂರಿನ ವಕ್ತೃವನ್ನು ಸಂದರ್ಶಿಸಿದಾಗ ರೆಡ್ಡಿ ರಾಜರ ಯುಗದಲ್ಲಿ ನಮ್ಮ ಪೂರ್ವಿಕರಿಗೆ ರಾಜಾಶ್ರಯ ದೊರೆತಿತ್ತು. ರಾಜರು ನಮ್ಮ ಕಲೆಯನ್ನು ಮೆಚ್ಚಿ ಭೂಮಿಯನ್ನು ಹಲವು ಹಳ್ಳಿಗಳನ್ನು ಜಾಹಗೀರಾಗಿ ಕೊಟ್ಟಿದ್ದನು. ಆ ಸಂದರ್ಭದಲ್ಲಿ ನಮ್ಮ ಜನತೆ ಸುಖವಾಗಿದ್ದರೂ, ರೆಡ್ಡಿ ರಾಜರ ತರುವಾಯ ಜಮೀನ್ದಾರರ ಹಾವಳಿ ಹೆಚ್ಚಾಗಿ ನಮಗೆ ರಾಜನು ನೀಡಿದ ಭೂಮಿ ಹಾಗೂ ಜಾಹಗೀರುಗಳನ್ನು ಕಸಿದುಕೊಂಡರು. ಆಗ ಬೇರೆ ಮಾರ್ಗ ಕಾಣದೆ ಹೊಟ್ಟೆಪಾಡಿಗಾಗಿ ಊರುರು ಅಲೆಯುತ್ತಾ ಕರ್ನಾಟಕಕ್ಕೆ ವಲಸೆ ಬಂದೆವು ಎನ್ನುತ್ತಾನೆ.[೩೮] ಈ ರೀತಿಯಾಗಿ ತಮ್ಮ ಹೊಟ್ಟೆಪಾಡಿಗಾಗಿ ಊರುರು ಅಲೆಯುತ್ತಾ ಕರ್ನಾಟಕದ ರಾಯಚೂರು, ಬಳ್ಳಾರಿ, ಚಿತ್ರದುರ್ಗ, ಬೆಳಗಾಂ, ಬಾಗಲಕೋಟೆ ಮೊದಲಾದ ಪ್ರದೇಶಗಳಿಗೆ ವಲಸೆಗೊಂಡು ತಮ್ಮದೇ ಆದ ವಲಯಗಳನ್ನು ಗುರುತಿಸಿಕೊಂಡು ಕಲೆ ಪ್ರದರ್ಶನ ಮತ್ತು ಭಿಕ್ಷಾಟನೆಯ ಮೂಲಕ ಜೀವಿಸುತ್ತಿದ್ದಾರೆ. ಇವರಿಗೆ ಮನೆ, ಮಠ, ಆಸ್ತಿ ಎಲ್ಲವೂ ಜನರೇ ಆಗಿದ್ದಾರೆ. ಅವರ ವಿಶ್ವಾಸವೇ ನಮ್ಮ ಬದುಕಿಗೆ ಆಸರೆ ಎಂದು ಒಂದೊಂದು ಪ್ರದೇಶದಲ್ಲಿ ನೆಲೆನಿಂತಿದ್ದಾರೆ. ಇಂತಹ ನೆಲೆನಿಂತ ಹಗಲುವೇಷಗಾರರಲ್ಲಿ ದೇವದುರ್ಗ ತಾಲೂಕಿನ ಜನಸಮೂಹವು ಒಂದಾಗಿದೆ. ಈ ಸಮುದಾಯವು ಜನಪ್ರತಿನಿಧಿಗಳಿಂದ ತಮ್ಮ ಕಲೆ ಪ್ರದರ್ಶನದ ವಲಯಗಳನ್ನು ಗುರುತಿಸಿಕೊಂಡು ಜೀವನ ಸಾಗಿಸುತ್ತಿದ್ದಾರೆ.

ರಾಯಚೂರಿನ ಲೋಕಸಭಾ ಸದಸ್ಯರಾದ ಎ. ವೆಂಕಟೇಶ ನಾಯಕರವರು ದಿನಾಂಕ ೪.೩.೨೦೦೦ ದಂದು ತಮ್ಮ ಪ್ರಮಾಣ ಪತ್ರದಲ್ಲಿ ಈ ರೀತಿ ನಮೂದಿಸಿದ್ದಾರೆ. ದೇವದುರ್ಗ ತಾಲೂಕಿನ ಹಗಲುವೇಷಗಾರರು ವೃತ್ತಿಯಿಂದ ವೇಷಗಾರರಾಗಿದ್ದು ಇಡೀ ದೇವದುರ್ಗ ತಾಲೂಕಿನ ವ್ಯಾಪ್ತಿಯಲ್ಲಿ ತಮ್ಮ ಕಲೆಯನ್ನು ಪ್ರದರ್ಶನ ಮಾಡಿ ಜೀವಿಸುವ ಹಕ್ಕು ಇವರಿಗಿದೆ. ಇವರು ಐತಿಹಾಸಿಕತೆಯನ್ನು ಬಿಂಬಿಸುವ ಪ್ರಾಚೀನ ಇತಿಹಾಸವನ್ನು ಜನತೆಗೆ ಕಥೆಯ ರೂಪದಲ್ಲಿ ಮನಮೋಹಕವಾಗಿ ಅಭಿನಂದಿಸಿ ತೋರಿಸುತ್ತಾರೆ. ಜನತೆ ಇವರ ಕಲೆಯನ್ನು ಪ್ರೋತ್ಸಾಹಿಸಿ ಇವರಿಗೆ ಸಹಕಾರ ನೀಡಬೇಕೆಂದು ತಮ್ಮ ಪ್ರಮಾಣ ಪತ್ರದಲ್ಲಿ ಹಗಲುವೇಷಗಾರರಿಗೆ ಬರವಣಿಗೆಯ ಮೂಲಕ ನೀಡಿದ್ದಾರೆ. ಈ ರೀತಿ ಹಗಲುವೇಷಗಾರರು ತಮ್ಮ ಕಲೆ ಪ್ರದರ್ಶನ ವಲಯಗಳನ್ನು ಗುರುತಿಸಿಕೊಂಡು ಒಬ್ಬರ ಪ್ರದೇಶದ ವ್ಯಾಪ್ತಿಯೊಳಗೆ ಇನ್ನೊಬ್ಬರು ಹೋಗದಂತೆ ಜೀವನ ಸಾಗಿಸುತ್ತಿದ್ದಾರೆ.

**ಅಡಿಟಿಪ್ಪಣಿ**

೧. ಕೂಸಣ್ಣ ದಾಸನೂರು, 'ಶೋಷಿತ ಜಂಗಮರ ಮೀಸಲಾತಿ', ಮಾತಂಗ ಪ್ರಕಾಶನ, ಮೈಸೂರು, ೧೯೯೯, ಪು.೧೫೫

೨. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಬುಡಕಟ್ಟು ಸಂ-೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೧, ಪು.೬೨೮

೩. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು.೧೫

೪. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೨, ಪು.೬೨೯

೫. ಅದೇ ಪು.೬೨೬

೬. ಅರ್‍ವಿಯಸ್ ಸುಂದರಂ, ಅನು: 'ಆಂಧ್ರಪ್ರದೇಶದ ಜಾನಪದ', ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ, ೧೯೭೮, ಪು.೧೫೭

೭. ಮೌಖಿಕ ಸಂದರ್ಶನ, ನಾಗಪ್ಪ, ವಯಸ್ಸು ೫೧, ದಿನಾಂಕ ೨೮.೧.೦೪, ಗಬ್ಬೂರು

೮. ಮೌಖಿಕ ಸಂದರ್ಶನ, ಶಿವಪ್ಪ, ವಯಸ್ಸು ೫೮, ದಿನಾಂಕ ೩೦.೧.೦೪, ಗಬ್ಬೂರು

೯. ಮೌಖಿಕ ಸಂದರ್ಶನ, ರಾಮಣ್ಣ, ವಯಸ್ಸು ೫೦, ದಿನಾಂಕ ೬.೧.೦೪, ದೇವದುರ್ಗ

೧೦. ಮೌಖಿಕ ಸಂದರ್ಶನ, ರಾಮಯ್ಯ, ವಯಸ್ಸು ೭೦, ದಿನಾಂಕ ೧೫.೧.೦೪, ದೇವದುರ್ಗ

೧೧. ಮೌಖಿಕ ಸಂದರ್ಶನ, ದುರುಗಪ್ಪ, ವಯಸ್ಸು ೬೫, ದಿನಾಂಕ ೧೨.೨.೦೪, ಜಾಹಗೀರ್ ಜಾಡಲದಿನ್ನಿ

೧೨. ಸೀತಾರಾಮಯ್ಯ ಎಂ.ವಿ., ಸಂ: ಕವಿರಾಜಮಾರ್ಗ, ಪರಿಚ್ಛೇದ-೧, ಪದ್ಯ-೬೮, ಕರ್ನಾಟಕ ಸಂಘ ಸಹಕಾರಿ ಸೈನ್ಸ್ ಮತ್ತು ಆರ್ಟ್ಸ್ ಕಾಲೇಜ್, ಬೆಂಗಳೂರು, ೧೯೬೮, ಪು.೧೪

೧೩. ನರಸಿಂಹಚಾರ್ ಡಿ.ಎಲ್., ಸಂ: 'ವಡ್ಡಾರಾಧನೆ', ಶಾರದ ಮಂದಿರ, ಮೈಸೂರು, ೧೯೭೦, ಪು.೧೮

೧೪. ಶಾಮಶಾಸ್ತ್ರಿ ಆರ್., ಸಂ: 'ನಯಸೇನನ ಧರ್ಮಾಮೃತಂ', ಪದ್ಯ-೧೦೫, ಅಶ್ವಾಸ-೨, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೨೬

೧೫. ಹಿರೇಮಠ ಆರ್.ಸಿ., 'ಚನ್ನಬಸವಣ್ಣನ ವಚನಗಳು', ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪, ಪು.೯೧

೧೬. 'ಚೇಡರ ದಾಸಿಮಯ್ಯನ ವಚನ, ಆದೃತಿ ಶೋಷಿತ ಜಂಗಮರ ಮೀಸಲಾತಿ', ಲೇ.ಕೂಸಣ್ಣ ದಾಸನೂರು, ಮಾತಂಗ ಪ್ರಕಾಶನ, ಮೈಸೂರು, ೧೯೯೯, ಪು.೩೩

೧೭. ಅದೇ ಪು.೭೬

೧೮. ರಾವ್ ಪಿ.ಎಸ್.ಬಿ., ಸಂ: 'ಬಸವಣ್ಣನ ವಚನ ಸಂ-೧', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩, ಪು.೨೪

೧೯. ಹಿರೇಮಠ ಆರ್.ಸಿ., ಸಂ: 'ಸಂಕೀರ್ಣ ವಚನ ಸಂಪುಟ-೮', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೭೧, ಪು.೧೮೦

೨೦. ಅದೇ ಪು.೨೮೪

೨೧. 'ನುಲಿಯ ಚಂದಯ್ಯನ ವಚನ, ಆವೃತಿ: ಶೋಷಿತ ಜಂಗಮರ ಮೀಸಲಾತಿ', ಲೇ. ಕೂಸಣ್ಣ ದಾಸನೂರು, ಮಾತಂಗ ಪ್ರಕಾಶನ, ಮೈಸೂರು, ೧೯೯೯, ಪು.೩೩

೨೨. ಹಿರೇಮಠ ಆರ್.ಸಿ., ಸಂ: 'ಸಂಕೀರ್ಣ ವಚನ ಸಂಪುಟ-೩', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩, ಪು.೧೩೯

೨೩. ಅದೇ ಪು.೫೬

೨೪. ಅದೇ ಪು.೫೬

೨೫. ಹಿರೇಮಠ ಆರ್.ಸಿ., ಸಂ: 'ಸಂಕೀರ್ಣ ವಚನ ಸಂಪುಟ-೮', ಜನಪ್ರಿಯ ಆವೃತ್ತಿ, ೧೯೭೧ , ಪು.೭೧೩

೨೬. ಅದೇ ಪು.೧೮೦

೨೭. ಹಳ್ಳಿಕಟ್ಟಿ, ಫ.ಗು., ಸಂ: 'ಹರಿಹರನ ರಗಳೆಗಳು', ಸಮಾಜ ಪುಸ್ತಕಾಲಯ, ಧಾರವಾಡ, ೧೯೯೩, ಪು.೪೬೫

೨೮. ಬಸವರಾಜ ಮಲಶೆಟ್ಟಿ, 'ಉತ್ತರ ಕರ್ನಾಟಕದ ಬಯಲಾಟಗಳು', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೩, ಪು.೨೦,೨೨

೨೯. ಪೋತೆ ಹೆಚ್.ಟಿ., 'ಹೈದರಾಬಾದ್ ಕರ್ನಾಟಕ ಜನಪದ ಪ್ರದರ್ಶನ ಕಲೆಗಳು', ಅಂಬು ಪ್ರಕಾಶನ, ರಾಯಚೂರು, ೨೦೦೦, ಪು.೨೩೯

೩೦. Edgarthrston, 'Castes and Tribes of southern India', Asian Educational Services New Delhi, 1987, page-454

೩೧. Nanjudaih H.V., Ananthkrishan Ayer K.L., Vol-III, 'The Mysore Tribes and Castes', Mittal Publications, New Delhi, 1988, page-471

೩೨. Suryanath V. Kamath, Ed: 'Gazetter of India', Government of Karnataka, (Belgaum District) 1987, page-221

೩೩. Singh K.S., 'The Scheduled Castes', Oxford University, Delhi, 1993, page-202, 207

೩೪. Mythri K.M., 'The Caste Certificate Problem of Budga Jangam', Delhi, 1999, page-5

೩೫. ಸುಂಕಾಪುರ ಎಂ.ಎಸ್., ಸಂ:ಲೇ: ಎಂ.ಎಂ. ಕಲಬುರ್ಗಿ, 'ಜನಪದ ಸಾಹಿತ್ಯ ದರ್ಶನ-೬', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೪, ಪು.೩೦೦,೩೦೮

೩೬. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೧, ಪು.೬೨೯

೩೭. ಚಿದಾನಂದ ಮೂರ್ತಿ ಎಂ., 'ಜನ-ಜನಪದ-ಜಾನಪದ', ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨, ಪು.೧೨

೩೮. ಮೌಖಿಕ ಸಂದರ್ಶನ, ನಾಗಪ್ಪ, ವಯಸ್ಸು ೫೧, ದಿನಾಂಕ ೧೪.೨.೦೪, ಗಬ್ಬೂರು

***

ಅಧ್ಯಾಯ ೩

# ಹಗಲುವೇಷಗಾರರ ಸಾಮಾಜಿಕ ಸ್ಥಿತಿಗತಿ

ಹಗಲುವೇಷಗಾರರ ಬದುಕು ಹಲವಾರು ವಿಶಿಷ್ಟತೆಗಳಿಂದ ಕೂಡಿದ್ದಾಗಿದೆ. ಇದು ಅವರ ಬದುಕನ್ನು ಅರ್ಥೈಸಿಕೊಂಡಾಗ ಹಾಗೂ ಸೂಕ್ಷ್ಮ ಅಧ್ಯಯನ ನಡೆಸಿದಾಗ ಮಾತ್ರ ತಿಳಿದು ಬರಲು ಸಾಧ್ಯ. ಆಧುನಿಕತೆಯ ಪ್ರವೇಶದಿಂದಾಗಿ ಈ ಸಮುದಾಯದೊಳಗೆ ಹಲವಾರು ಬದಲಾವಣೆಗಳಾಗಿದ್ದರೂ, ವಂಶಪಾರಂಪರ್ಯವಾಗಿ ಬೆಳೆದು ಬಂದ ನಂಬಿಕೆ, ಆಚರಣೆ, ವೃತ್ತಿಗಳು ಯಥಾಪ್ರಕಾರ ಮುಂದುವರಿದಿವೆ. ಪ್ರಸ್ತುತ ಅಧ್ಯಾಯದಲ್ಲಿ ಹಗಲವೇಷಗಾರರ ಕುಟುಂಬ ವ್ಯವಸ್ಥೆ, ವಸತಿ ವ್ಯವಸ್ಥೆ, ನ್ಯಾಯಾಂಗ ವ್ಯವಸ್ಥೆ, ದೇವತಾರಾಧನೆ ಮುಂತಾದ ವಿಷಯಗಳ ಕುರಿತು ಚರ್ಚಿಸಲಾಗಿದೆ.

## ೧. ಕುಟುಂಬ ವ್ಯವಸ್ಥೆ

ಹಗಲುವೇಷಗಾರರದ್ದು ಪಿತೃಪ್ರಧಾನ ಕುಟುಂಬ ವ್ಯವಸ್ಥೆ. ಕುಟುಂಬದ ಯಜಮಾನಿಕೆಯನ್ನು ತಂದೆ ವಹಿಸಿರುತ್ತಾನೆ. ಈತನನ್ನು 'ಪೆದ್ದವಾಳು' (ಮುಖಂಡ) ಎಂದು ಕರೆಯುತ್ತಾರೆ. ಈತನು ಕುಟುಂಬದ ಜವಾಬ್ದಾರಿಯನ್ನು ಹೊತ್ತಿರುತ್ತಾನೆ. ತನ್ನ ಕುಟುಂಬದ ಗಾತ್ರಕ್ಕೆ ತಕ್ಕಂತೆ ಗುಡಾರಗಳನ್ನು ನಿರ್ಮಿಸಿಕೊಳ್ಳುತ್ತಾನೆ. ಎಲ್ಲರು ಒಟ್ಟಾಗಿ ಆ ಗುಡಾರಗಳಲ್ಲಿ ಜೀವಿಸುತ್ತಿರುತ್ತಾರೆ. ಆತನ ಮನೆಯವರು (ಹೆಂಡತಿ ಮತ್ತು ಮಕ್ಕಳು) ತಾವು ದುಡಿಮೆಯಿಂದ ಸಂಪಾದಿಸಿದ ಆದಾಯವನ್ನು ತಂದುಕೊಡುತ್ತಾರೆ. ಕುಟುಂಬಕ್ಕೆ ಬೇಕಾದ ದೈನಂದಿನ ಅವಶ್ಯಕತೆಗಳನ್ನು ಪೂರೈಸುವುದು ಮನೆಯ ಮುಖ್ಯಸ್ಥನ ಜವಾಬ್ದಾರಿ. ಈತನು ತನ್ನ ಕುಟುಂಬದ ಕಾರ್ಯಚಟುವಟಿಕೆಗಳು ಇದ್ದಾಗ ಇತರೆ ಕುಟುಂಬಗಳಿಗೆ ಸಂದೇಶವನ್ನು ತಿಳಿಸುತ್ತಾನೆ. ಅವರು ಬಂದು ಈತನ ಕುಟುಂಬದ ಚಟುವಟಿಕೆಗಳನ್ನು ಪೂರೈಸುತ್ತಾರೆ. ಈ ಸಂದರ್ಭದಲ್ಲಿ ಈತನು ಬಂದಂತಹ ಕುಲಸ್ಥರಿಗೆ ಹೆಂಡ ಸರಾಯಿಗಳನ್ನು ಕುಡಿಸಿ ಅವರಿಗೆ ಬೀಳ್ಕೊಡುತ್ತಾನೆ. ಜನ ಸಮುದಾಯದಲ್ಲಿ ನಡೆಯುವ ನ್ಯಾಯ ವ್ಯವಸ್ಥೆಗೆ ಈತನು ತನ್ನ ಕುಟುಂಬದ ಪರವಾಗಿ ಭಾಗವಹಿಸುತ್ತಾನೆ. ಹೆಣ್ಣು ಮಕ್ಕಳ ಮದುವೆ ಮುಹೂರ್ತಗಳನ್ನು ಈತನು ನೆರವೇರಿಸಿಕೊಡುತ್ತಾನೆ. ಜೊತೆಗೆ ಗಂಡು ಮಕ್ಕಳಿಗೆ ತಾನೆ ಜವಾಬ್ದಾರಿಯನ್ನು ತೆಗೆದುಕೊಂಡು ಮದುವೆ ಮಾಡಲು ಇತರೆ ಕುಟುಂಬದ ಮುಖಂಡರನ್ನು ಕರೆದುಕೊಂಡು ಹೆಣ್ಣುಗಳನ್ನು ಹುಡುಕಿ ನಿರ್ದಿಷ್ಟ ಅವಧಿಯಲ್ಲಿ ಮದುವೆ ಮಾಡಿಸುತ್ತಾನೆ.

ಮದುವೆ ಮಾಡಿದ ನಂತರ ಅವರು ತನ್ನ ಕುಟುಂಬದ ಜೊತೆಗೆ ಇರಲು ಇಷ್ಟಪಟ್ಟರೆ ಅವರನ್ನು ತನ್ನ ಕುಟುಂಬದಲ್ಲಿ ಸೇರಿಸಿಕೊಳ್ಳುತ್ತಾನೆ. ಅವರು ಬೇರೆ ಇರಲು ಇಷ್ಟಪಟ್ಟರೆ ಅವರಿಗೆ ತನ್ನ ಗುಡಾರದ ಅಕ್ಕ-ಪಕ್ಕ ಬೇರೆ ಸಣ್ಣಗಾತ್ರದ ಗುಡಾರವನ್ನು ಹಾಕಿ ಕೊಡುತ್ತಾನೆ. ಈತನ ಕುಟುಂಬದ ಸಮಸ್ಯೆಗಳಲ್ಲಿ ಇತರೆ ಕುಟುಂಬದವರು ಭಾಗಿಯಾಗುವಂತಿಲ್ಲ. ಒಂದು ವೇಳೆ ಈತನೆ ಇತರೆ ಕುಟುಂಬದವರಿಗೆ ಆಹ್ವಾನ ನೀಡಿದರೆ ಅವರು ಬಂದು ಈತನ ಕುಟುಂಬದ ಸಮಸ್ಯೆಯಲ್ಲಿ ಭಾಗಿಯಾಗಿ ಸಮಸ್ಯೆಯನ್ನು ನಿರ್ಣಯಿಸಿ ಹೋಗುತ್ತಾರೆ.[೧]

### ೨. ಜನನ

ವೇಷಗಾರ ಜನಸಮುದಾಯದಲ್ಲಿ ಜನನ ಸಂದರ್ಭದಲ್ಲಿ ಅನುಸರಿಸುವ ಸಂಪ್ರದಾಯಗಳು ತುಂಬಾ ಕಟ್ಟುನಿಟ್ಟಿನದ್ದಾಗಿವೆ. ಗರ್ಭಿಣಿಯಾದ ಹೆಂಗಸಿಗೆ ಹೆರಿಗೆ ನೋವು ಕಾಣಿಸಿಕೊಂಡ ಕೂಡಲೆ ವಿವಿಧ ಗುಡಾರಗಳಲ್ಲಿರುವ ವಿವಾಹಿತ ಹೆಂಗಸರು ಕೂಡಿ ಹೆರಿಗೆ ಮಾಡಿಸುತ್ತಾರೆ. ಇವರ ಜನಾಂಗದಲ್ಲಿ ಮಂತ್ರಸಾನಿ ಎನ್ನುವ ಸೂಲಗಿತ್ತಿಯು ಹೆರಿಗೆ ಸಂದರ್ಭದಲ್ಲಿ ಪ್ರಮುಖ ಪಾತ್ರ ವಹಿಸುತ್ತಾಳೆ. ಮಗುವಿನ ಜನನವಾದ ಕೂಡಲೆ ಮಂತ್ರಸಾನಿಯು ಕುಡುಗೋಲಿನಿಂದ ಹೊಕ್ಕಳು ಬಳ್ಳಿಯನ್ನು ಕೊಯ್ದು ಅದಕ್ಕೆ ಅರಿಶಿಣ ಹರಳೆಣ್ಣೆಯನ್ನು ಕಲಿಸಿ ಹಚ್ಚುತ್ತಾಳೆ. ನಂತರ ಮಗುವಿಗೆ ಸೀಗೆಪುಡಿಯಿಂದ ಮೈಯನ್ನು ತೊಳೆಯುತ್ತಾಳೆ. ಹೆರಿಗೆಯ ಸಮಯದಲ್ಲಿ ಬಿದ್ದ ಮಾಸನ್ನು ಒಂದು ಸಣ್ಣ ಸೋರೆಯಲ್ಲಿ ಹಾಕಿ ಬಾಣತಿಯ ಪಕ್ಕದಲ್ಲಿ ಕುಡುಗೋಲು ಮತ್ತು ಮಾಸಿನ ಸೋರೆಯನ್ನು ಇಡುತ್ತಾಳೆ. ಮಾಸನ್ನು ಈ ಜನಾಂಗವು 'ಕೊಲ್ಲು' ಎಂದು ಕರೆಯುತ್ತಾರೆ. ಮಗುವಿನ ಸ್ನಾನ ಮಾಡಿಸಿದ ನಂತರ ಗುಡಾರದ ಮುಂದುಗಡೆ ಸ್ವಲ್ಪ ದೂರದಲ್ಲಿ ಮಂತ್ರಸಾನಿ ಅದನ್ನು ಹೂಳುತ್ತಾಳೆ. ಕೊಲ್ಲುವಿನಲ್ಲಿ ಎರಡು ವಿಧಗಳು ಉಂಟು. ಅವೆಂದರೆ 'ದೊರಕಲ್ಲು', ಇನ್ನೊಂದು 'ದೊಂಗಕಲ್ಲು'. ಅಂದರೆ ಮಗು ಹುಟ್ಟಿದ ಮೇಲೆ ಅದರ ಅಂಗಾಂಗಗಳು ಸರಿಯಾಗಿ ಇದ್ದರೆ ಅದನ್ನು ದೊರಕಲ್ಲು ಎನ್ನುತ್ತಾರೆ. ಮಗು ಹುಟ್ಟಿದಾಗ ಅದರ ಅಂಗಾಂಗಗಳು ಸರಿಯಾಗಿ ಇಲ್ಲದಿದ್ದರೆ ಅದನ್ನು ದೊಂಗಕಲ್ಲು ಎನ್ನುತ್ತಾರೆ.[೨] ನಂತರ ಮಗು ಹುಟ್ಟಿದ ಮೂರು ದಿನಕ್ಕೆ ಮಗುವಿಗೆ ನಾಮಕರಣ ಮಾಡುತ್ತಾರೆ. ಇದನ್ನು 'ಪುರುಡು' ಎನ್ನುತ್ತಾರೆ. ಆ ದಿನ ಮನೆಯನ್ನು ಸಾರಿಸಿ ಗೋಮೂತ್ರ ಸಿಂಪಡಿಸುತ್ತಾರೆ. ನಂತರ ರಾತ್ರಿ ಮಾಂಸದಡಿಗೆ ಮಾಡಿ ಅಲ್ಲಿನ ಕುಲಸ್ಥರಿಗೆಲ್ಲಾ ಊಟ ಬಡಿಸುತ್ತಾರೆ ಮತ್ತು ಹೆಂಡ-ಸರಾಯಿ ಕುಡಿಸುತ್ತಾರೆ. ನಂತರ ಮಗುವಿಗೆ ನಾಮಕರಣ ಮಾಡುತ್ತಾರೆ. ತೊಟ್ಟಿಲಲ್ಲಿ ಮಗುವನ್ನು ಹಾಕಿ ಸೋದರತ್ತೆ ನಾಮಕರಣ ಮಾಡಿ ತೊಟ್ಟಿಲನ್ನು ತೂಗುತ್ತಾಳೆ. ಇವರು ಸಾಮಾನ್ಯವಾಗಿ ಬಟ್ಟೆಯಿಂದ ಮಾಡಿದ ಜೋಳಿಗೆಯಾಕಾರದ ತೊಟ್ಟಿಲನ್ನು ಬಳಸುತ್ತಾರೆ. ಮರದ ತೊಟ್ಟಿಲಾಗಲಿ ಅಥವಾ ಕಬ್ಬಿಣದ ತೊಟ್ಟಿಲಾಗಲಿ ಇವರು ಬಳಸುವುದಿಲ್ಲ, ಏಕೆಂದರೆ

ಇವರು ಅಲೆಮಾರಿಗಳಾಗಿರುವುದರಿಂದ ಸಂಚಾರ ಮಾಡಲು ತೊಂದರೆ ಆಗುವುದು ಎನ್ನುವ ಉದ್ದೇಶದಿಂದ ಇವರು ಮರದ ಅಥವಾ ಕಬ್ಬಿಣದ ತೊಟ್ಟಿಲುಗಳನ್ನು ಬಳಸುವುದಿಲ್ಲ. ಇನ್ನೊಂದು ಅವುಗಳ ಬೆಲೆ ಹೆಚ್ಚು ಇರುವುದರಿಂದ ಅವುಗಳನ್ನು ಬಳಸುವುದಿಲ್ಲ. ಇವರು ಸಾಮಾನ್ಯವಾಗಿ ಹೆಣ್ಣು ಮಗು ಹುಟ್ಟಿದರೆ ಹೆಣ್ಣು ದೇವತೆಗಳಾದ ಜಂಬಲಮ್ಮ, ಮಾರೆಮ್ಮ, ಲಕ್ಷ್ಮಮ್ಮ, ಪಾರ್ವತಿ, ಶಂಕ್ರಮ್ಮ, ಮಹಾದೇವಿ ಮುಂತಾದ ಹೆಣ್ಣು ದೇವರುಗಳ ಹೆಸರನ್ನು ಇಡುತ್ತಾರೆ. ಗಂಡು ಮಗುವಾಗಿದ್ದರೆ ಶಂಕ್ರಪ್ಪ, ಶಿವಲಿಂಗಪ್ಪ, ಈರಣ್ಣ, ರುದ್ರಪ್ಪ, ಮಲ್ಲಿಕಾರ್ಜನ ಮುಂತಾದ ಹೆಸರಗಳನ್ನು ಇಡುತ್ತಾರೆ. ಮಗುವಿಗೆ ನಾಮಕರಣ ಮಾಡಿದ ನಂತರ ಮಗುವಿಗೆ ಹೊಕ್ಕಳಿನಿಂದ ಸ್ವಲ್ಪ ಕೆಳಭಾಗಕ್ಕೆ ಸೂಜಿಯಿಂದ ಬರೆಗಳನ್ನು ಇಡುತ್ತಾರೆ. ಮಗುವಿಗೆ ಬರೆಗಳನ್ನು ಎಳೆಯುವುದಕ್ಕಿಂತ ಮುಂಚೆ ಬಜೆಗಳನ್ನು ತಂದು ಅವುಗಳನ್ನು ಸಣ್ಣ ಸಣ್ಣ ತುಂಡುಗಳನ್ನಾಗಿ ಮಾಡಿ ಒಂದು ದಾರಕ್ಕೆ ಪೋಣಿಸಿ ತಾಯಿಯ ಬಲಗೈ ಮತ್ತು ಕೊರಳಿಗೆ ಕಟ್ಟುತ್ತಾರೆ. ನಂತರ ಮಾಸನ್ನು ಹೂಳಿದ ಜಾಗಕ್ಕೆ ಬಾಣತಿಯನ್ನು ಕರೆದುಕೊಂಡು ಹೋಗಿ ಅದಕ್ಕೆ ಪೂಜೆ ಮಾಡುತ್ತಾರೆ. ಮಗು ಹುಟ್ಟಿದ ಐದನೆ ದಿನಕ್ಕೆ ಗಂಗಾದೇವಿಗೆ ಹೋಗಿ ಅಲ್ಲಿ ಪೂಜೆಗಳನ್ನು ಮಾಡಿ ಅಲ್ಲಿಂದ ಒಂದು ಬಿಂದಿಗೆ ತಣ್ಣೀರನ್ನು ತುಂಬಿಕೊಂಡು ಬರುತ್ತಾಳೆ. ಆರನೆ ದಿನಕ್ಕೆ ಬಾಣತಿಯು ಕುಟುಂಬದ ಇತರೆ ಹೆಣ್ಣು ಮಕ್ಕಳ ಜೊತೆ ಭಿಕ್ಷೆ ಬೇಡಲು ಊರಳೊಗೆ ಸಂಚಾರ ಮಾಡುತ್ತಾಳೆ. ನಂತರ ಬಾಣತಿಯು ಕುಟುಂಬದ ಎಲ್ಲಾ ಕಾರ್ಯಚಟುವಟಿಕೆಗಳಲ್ಲಿ ಬಾಗಿಯಾಗುತ್ತಾಳೆ.

### ೩. ಮರಣ

ಹಗಲುವೇಷಗಾರ ಜನಾಂಗದಲ್ಲಿ ಸಾವಿನ ಸನ್ನಿವೇಶವು ಮಹತ್ವದ್ದಾಗಿದೆ. ಈ ಜನಾಂಗದ ವ್ಯಕ್ತಿಯ ಯಾವ ಊರಿನಲ್ಲಿ ಸಾಯುತ್ತಾನೋ ಅದೇ ಊರಿನಲ್ಲಿ ಹೂಳುವ ಪದ್ಧತಿ ಬೆಳೆಸಿಕೊಂಡು ಬಂದಿದ್ದಾರೆ. ಏಕೆಂದರೆ ಈ ಜನಾಂಗವು ಅಲೆಮಾರಿ ಜನಾಂಗವಾಗಿರುವುದರಿಂದ ಇವರಿಗೆ ಸ್ಥಿರವಾದ ಊರು, ಸ್ವಂತದ್ದು ಎನ್ನುವ ನೆಲೆ, ಆಸ್ತಿ ಇಲ್ಲ. ಅಲ್ಲದೆ ಸತ್ತ ಹೆಣವನ್ನು ಊರಿಂದ ಇನ್ನೊಂದು ಊರಿಗೆ ತರಲು ಹಣದ ಕೊರತೆ ಒಂದು ಕಾರಣವಾಗಿರಬಹುದು. ಈ ಜನಾಂಗದಲ್ಲಿ ಎರಡು ವಿಶಿಷ್ಟವಾದ ಆಚರಣೆಗಳು ಜರುಗುತ್ತವೆ. ಮೊದಲನೆಯದು ಸತ್ತ ವ್ಯಕ್ತಿ ಗುರುದೀಕ್ಷೆಯನ್ನು ಪಡೆದುಕೊಂಡಿದ್ದರೆ ಅವನಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಗಳನ್ನು ಧರಿಸಿ ವಿಭೂತಿಯನ್ನು ಹಣೆಯ ಮೇಲೆ, ತೋಳುರಟ್ಟೆಯ ಮೇಲೆ, ಪಾದದ ಮೇಲೆ ಧರಿಸುತ್ತಾರೆ. ಮತ್ತು ಸತ್ತ ವ್ಯಕ್ತಿಯನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವುದರೊಳಗಾಗಿ ಅವನಿಗೆ ಗುರುದೀಕ್ಷೆಯ ಸಂಪ್ರದಾಯದಂತೆ ಐದು ಬಾರಿ ಪೂಜೆ ಪುರಸ್ಕಾರ ಮಾಡುತ್ತಾರೆ. ಸತ್ತ ಹೆಣದ ಮುಂದೆ ಕುಲಸ್ಥರೆಲ್ಲಾ ಸೇರಿಕೊಂಡು ಭಜನೆ ಮಾಡುತ್ತಾರೆ. ಸತ್ತ ಹೆಣಕ್ಕೆ ಪೂಜೆ ಪುರಸ್ಕಾರಗಳನ್ನು ಇದೆ ಜನಾಂಗದಲ್ಲಿ 'ಸಿರಿಸ್ಯಾಲ' ಮನೆತನಕ್ಕೆ ಸೇರಿದ ವ್ಯಕ್ತಿಯು ಜಂಗಮ ವೇಷ ಧರಿಸಿಕೊಂಡು ಪೂಜೆ

ಪುರಸ್ಕಾರಗಳನ್ನು ಮಾಡಿ ಹೆಣವನ್ನು ಒಂದು ಕೌದಿಯ ಮೇಲೆ ಪದ್ಮಾಸನದ ರೂಪದಲ್ಲಿ ಕೂಡಿಸುತ್ತಾರೆ. ಸತ್ತ ಸುದ್ದಿಯನ್ನು ಜನಾಂಗದ ತಳವಾರ (ಹಿರಿಯ) ನೆರೆಹೊರೆಯ ಕುಲಸ್ಥರಿಗೆ ಸುದ್ದಿ ಮುಟ್ಟಿಸಿ ಬರುತ್ತಾನೆ. ನೆರೆಹೊರೆಯ ಕುಲಸ್ಥರೆಲ್ಲಾ ಬಂದು ಸೇರಿದ ಮೇಲೆ ಹೆಣವನ್ನು ಸ್ಮಶಾನಕ್ಕೆ ಒಯ್ಯಲು ಚಟ್ಟವನ್ನು ಕಟ್ಟುತ್ತಾರೆ ಇದು ಕೇವಲ ಗುರುದೀಕ್ಷೆ ಪಡೆದುಕೊಂಡ ವ್ಯಕ್ತಿಗೆ ಮಾತ್ರ. ನಂತರ ಹೆಣವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ಜಂಗಮ ವೇಷ ಧರಿಸಿದ 'ಸಿರಿಸ್ಯಾಲ' ವ್ಯಕ್ತಿಯು ಹೆಣವನ್ನು ಹೂಳುತ್ತಾನೆ.

ಸತ್ತ ವ್ಯಕ್ತಿಯು ಸಾಮಾನ್ಯ ವ್ಯಕ್ತಿಯಾಗಿದ್ದರೆ ಅವರಿಗೆ ಸ್ನಾನಮಾಡಿಸಿ ಹೊಸ ಬಟ್ಟೆ ತೊಡಿಸಿ ಹಣೆಯ ಮೇಲೆ ಕುಂಕುಮ, ವಿಭೂತಿಯನ್ನು ಧರಿಸುತ್ತಾರೆ. ಸಾಮಾನ್ಯವಾಗಿ ಹೆಣವನ್ನು ಪದ್ಮಾಸನದಲ್ಲಿ ಕುಳ್ಳಿರಿಸಿ ಭಜನೆ ಮಾಡುತ್ತಾರೆ. ನೆರೆಯ ಕುಲಸ್ಥರೆಲ್ಲಾ ಸೇರಿದ ಮೇಲೆ ಅವನನ್ನು ಸ್ಮಶಾನಕ್ಕೆ ಒಂದು ಕೌದಿಯಲ್ಲಿ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ 'ಸಿರಿಸ್ಯಾಲ' ಮನೆತನದವನು ಹೆಣವನ್ನು ಹೂಳುತ್ತಾನೆ. ಹೆಣವನ್ನು ಹೂಳಿದ ನಂತರ ಎಲ್ಲರೂ ಹೆಂಡದ ಅಂಗಡಿಗೆ ಬರುತ್ತಾರೆ. ಹೆಂಡದ ಅಂಗಡಿಯಲ್ಲಿ ಜಂಗಮ ವೇಷಧರಿಸಿದ ಸಿರಿಸ್ಯಾಲ ಮನೆತನದ ವ್ಯಕ್ತಿಯು ಹೆಂಡವನ್ನು ಎಲ್ಲರಿಗೂ ಸಿಂಪಡಿಸಿ ಅವರನ್ನು ಶುದ್ಧಗೊಳಿಸುತ್ತಾನೆ. ನಂತರ ಎಲ್ಲರೂ ಹೆಂಡವನ್ನು ಕುಡಿದು ತಮ್ಮ ತಮ್ಮ ಗುಡಾರಗಳಿಗೆ ಹಿಂತಿರುಗುತ್ತಾರೆ. ನಂತರ ಸತ್ತ ಮೂರು ದಿನಕ್ಕೆ ಮೂರು ದಿನದ ಕಾರ್ಯ ಮಾಡುತ್ತಾರೆ. ಆ ದಿನ ಸತ್ತ ವ್ಯಕ್ತಿಯು ತಿನ್ನುತ್ತಿದ್ದ ಆಹಾರ ಪಾನಿಯಗಳನ್ನು ಸಿದ್ದಪಡಿಸಿಕೊಂಡು ಸ್ಮಶಾನಕ್ಕೆ ಹೋಗಿ ಸತ್ತ ವ್ಯಕ್ತಿಯ ಸಮಾಧಿಯ ಮುಂದೆ ಅವನು ಬಯಸುತ್ತಿದ್ದ ಎಲ್ಲಾ ಆಹಾರ-ಪಾನಿಯಗಳನ್ನು ಒಂದು ಪತ್ರೋಳಿಯಲ್ಲಿ ಹಾಕಿ ಒಂದು ಗುಂಡಿಯನ್ನು ತೋಡಿ ಇಟ್ಟು ಮೇಲೆ ಬಂಡೆ ಮುಚ್ಚಿ ಬರುತ್ತಾರೆ. ನಂತರ ಐದನೇ ದಿನಕ್ಕೆ ದೇವರ ಕಾರ್ಯ ಮಾಡುತ್ತಾರೆ. ಆ ದಿನ ಗುಡಾರದಲ್ಲಿ ಒಂದು ಸಣ್ಣ ಗುಡಿಯನ್ನು ಮಾಡಿ, ಸಾರಿಸಿ, ಎಣ್ಣೆ ದೀಪವನ್ನು ಹಚ್ಚಿ ಒಂದು ಹೊಸ ಮರ ತಂದು ಅದರಲ್ಲಿ ಸ್ವಲ್ಪ ಬೇಳೆ, ಅಕ್ಕಿ, ರಾಗಿ, ಹಾಕಿ ಹೊಸ ಬಟ್ಟೆಗಳನ್ನಿಟ್ಟು ದೇವರ ಹೆಸರಿನಲ್ಲಿ ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗಲೆಂದು ಎಡೆ ಮಾಡುತ್ತಾರೆ. ನಂತರ ಜಂಗಮ ವೇಷ ಧರಿಸಿದ 'ಸಿರಿಸ್ಯಾಲ' ಮನೆತನದ ವ್ಯಕ್ತಿಯ ಕಾಲನ್ನು ಸತ್ತ ವ್ಯಕ್ತಿಯ ಮನೆತನದವರು ಹಿಡಿದುಕೊಳ್ಳುತ್ತಾರೆ. ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗಲಿ ಮತ್ತು ಅವನನ್ನು ದೇವಲೋಕಕ್ಕೆ ಕಳಿಸುವಂತೆ ಬೇಡಿಕೊಳ್ಳುತ್ತಾರೆ. ಆಗ ಜಂಗಮನು ತನ್ನ ಘಂಟೆಯನ್ನು ನುಡಿಸುತ್ತಾ ಸತ್ತ ವ್ಯಕ್ತಿಯು ದೇವಲೋಕಕ್ಕೆ ಹೋದ ಹೋದ ಎನ್ನುತ್ತಾನೆ.[೩] ಆಗ ಎಲ್ಲರೂ ಆಕಾಶದ ಕಡೆಗೆ ನೋಡುತ್ತಾರೆ. ನಂತರ ಎಲ್ಲರೂ ತಮ್ಮ ತಮ್ಮ ಗುಡಾರಗಳಿಗೆ ತೆರಳುತ್ತಾರೆ. ಈ ಜನಾಂಗದಲ್ಲಿ ಗಂಡ **ಸತ್ತ ಮೇಲೆ ಹೆಂಡತಿ ಬಳೆ ಮತ್ತು ಕುಂಕುಮ ತೆಗೆಯುವ ಪದ್ಧತಿ ಇಲ್ಲ. ಈ ಜನಾಂಗದಲ್ಲಿ ವ್ಯಕ್ತಿ** ಸತ್ತ ಮೇಲೆ ಆಚರಣೆಗಳನ್ನು ಮಾಡಲು ಜಂಗಮರು ಬರುವುದಿಲ್ಲ. ತಮ್ಮ ಜನಾಂಗದಲ್ಲಿ ಸಿರಿಸ್ಯಾಲ

ಮನೆತನಕ್ಕೆ ಸೇರಿದ ವ್ಯಕ್ತಿಯು ಜಂಗಮನ ಸ್ಥಾನದಲ್ಲಿ ನಿಂತುಕೊಂಡು ಎಲ್ಲಾ ಆಚರಣೆಗಳನ್ನು ಮಾಡುತ್ತಾನೆ. ಸಾಮಾನ್ಯವಾಗಿ ಈ ಜನಾಂಗದಲ್ಲಿ ವೀರಶೈವ ಸಂಪ್ರದಾಯವು ಅನುಕರಣೆಯ ರೂಪದಲ್ಲಿ ಬೆಳೆದುಕೊಂಡು ಬಂದಿರುವುದು ಅವರ ಆಚರಣೆಗಳಿಂದ ವ್ಯಕ್ತವಾಗುತ್ತದೆ.

### ೪. ಋತುಮತಿ

ಹಗಲುವೇಷಗಾರ ಜನಸಮುದಾಯದಲ್ಲಿ ಹೆಣ್ಣು ಮೈ ನೆರೆದರೆ ಆಕೆಯನ್ನು ಗುಡಾರದಿಂದ ಸುಮಾರು ಎಂಟು ಅಥವಾ ಹತ್ತು ಅಡಿ ಜಾಗದಲ್ಲಿ ಪ್ರತ್ಯೇಕವಾದ ಗುಡಾರವನ್ನು ಹಾಕಿ ಕೂಡಿಸುತ್ತಾರೆ. ಆಕೆ ತವರಿನವರನ್ನು ಒಳಗೊಂಡು ಬೇರೆ ಕುಲಸ್ಥರನ್ನು ನೋಡುವ ಹಾಗೆ ಇಲ್ಲ. ಮೈನೆರೆದ ಐದು ದಿನದವರೆಗೆ ಕುಲಸ್ಥರೆಲ್ಲಾ ಆಕೆಗೆ ಕೊಬ್ಬರಿ ಬೆಲ್ಲ, ದವಸಧಾನ್ಯಗಳನ್ನು ತಂದುಕೊಡುತ್ತಾರೆ. ಆಕೆ ಬೆಳಗಾಗುವತ್ತಿಗೆ ಸ್ನಾನ ಮಾಡಿ ಬೇರೆ ಬಟ್ಟೆಗಳನ್ನು ಧರಿಸಿಕೊಂಡು ಗುಡಾರ ಸೇರುತ್ತಾಳೆ. ಆಕೆಯ ಬಟ್ಟೆಗಳನ್ನು ತಾಯಿ ಇಲ್ಲವೆ ಅಕ್ಕಂದಿರು ಸ್ವಚ್ಛ ಮಾಡಿಕೊಡುತ್ತಾರೆ. ಐದನೆ ದಿನಕ್ಕೆ ಹುಡುಗಿ ಇರುವ ಗುಡಾರವನ್ನು ಸಾರಿಸಿ ಆ ಜಾಗಕ್ಕೆ ಗೋಮೂತ್ರವನ್ನು ಸಿಂಪಡಿಸಿ ಕೋಳಿಯನ್ನು ಕೊಯ್ಯುತ್ತಾರೆ. ಕೋಳಿಯನ್ನು ಕೊಯ್ಯುವ ಸನ್ನಿವೇಶವನ್ನು ಮೈನೆರದ ಹೆಂಗಸು ನೋಡಿದರೆ ಒಳ್ಳೆಯದಾಗುತ್ತದೆ ಎನ್ನುವುದು ಅವರ ನಂಬಿಕೆ ಆ ದಿನ ಹೆಣ್ಣಿನ ತಂದೆ ತಾಯಿಯರು ಮಾಂಸದಡಿಗೆ ಮಾಡಿ ಕುಲಸ್ಥರಿಗೆಲ್ಲಾ ಉಣಬಡಿಸುತ್ತಾರೆ. ಮತ್ತು ಹೆಂಡ ಸಾರಾಯಿ ಕುಡಿಸುತ್ತಾರೆ. ಅಲ್ಲದೆ ಎಲ್ಲ ಕುಲಸ್ಥರಿಗೆ ದವಸ ಧಾನ್ಯಗಳನ್ನು ನೀಡುತ್ತಾರೆ. ಆ ದಿನ ಮೈನೆರೆದ ಹೆಂಗಸು ಸ್ನಾನವನ್ನು ಮಾಡಿಕೊಂಡು ಗೋಮೂತ್ರವನ್ನು ಸಿಂಪಡಿಸಿಕೊಂಡು ಆರತಿಯನ್ನು ಬೆಳಗಿ ನಂತರ ಕುಲಸ್ಥರ ಮುಖವನ್ನು ನೋಡುತ್ತಾಳೆ. ಈ ಜನಾಂಗದಲ್ಲಿ ಬಾಲ್ಯವಿವಾಹ ಪದ್ಧತಿ ಜಾರಿಯಲ್ಲಿರುವುದರಿಂದ ಹೆಣ್ಣು ಮೈನೆರೆಯುವ ಮೊದಲೆ ಮದುವೆಯಾಗಿದ್ದರೆ ಮೈನೆರೆದ ಮೇಲೆ ಹೆಣ್ಣಿನ ತಂದೆ ತಾಯಿಯರು ಹುಡುಗಿಯ ಗಂಡನ ಮನೆಗೆ ಅವರು ಎಲ್ಲೆ ಇದ್ದರೂ ಸುದ್ದಿ ಮುಟ್ಟಿಸುತ್ತಾರೆ. ಸುದ್ದಿ ಮುಟ್ಟಿದ ನಂತರ ಗಂಡನ ಮನೆಯವರು ಹೆಣ್ಣಿನ ತವರು ಮನೆಗೆ ಬಂದು ಸೊಸೆಯ ಸಂಭ್ರಮದಲ್ಲಿ ಭಾಗವಹಿಸಿ ಆ ದಿನ ತಗಲುವ ವೆಚ್ಚವನ್ನು ತಾವೆ ಭರಿಸಿಕೊಡುತ್ತಾರೆ. ನಂತರ ತಮ್ಮ ಸೊಸೆಯನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಗಂಡ ಹೆಂಡತಿಯನ್ನು ಜೊತೆ ಮಾಡುತ್ತಾರೆ.

### ೫. ವಿವಾಹ

ಈ ಜನಾಂಗದಲ್ಲಿ ಬಹಳ ಸರಳವಾದ ಮದುವೆ ಪದ್ದತಿಯನ್ನು ಕಾಣಬಹುದು. ಈ ಜನಾಂಗದ ಸಂಖ್ಯಾ ಪ್ರಮಾಣ ತುಂಬಾ ಕಡಿಮೆ ಇರುವುದರಿಂದ ಗಂಡು ಹಾಗು ಹೆಣ್ಣು ಹೆತ್ತ ಎರಡು ಕುಟುಂಬಗಳಲ್ಲಿ ಆತಂಕ ಕಾಡುತ್ತದೆ. ಜನಸಂಖ್ಯೆ ತುಂಬಾ ಕಡಿಮೆ ಇರುವುದರಿಂದ ತಮ್ಮ ಕುಲದಲ್ಲಿ ಹುಡುಗನಿಗೆ ಹೆಣ್ಣು ಸಿಗುವುದು ಇಲ್ಲವೋ ಅಥವಾ ಹುಡಿಗಿಗೆ ಗಂಡು ಸಿಗುವುದೋ ಎನ್ನುವ ಆತಂಕ

ಕಾಡುತ್ತಿರುತ್ತದೆ. ಆದುದರಿಂದ ಈ ಜನಾಂಗದಲ್ಲಿ ಹೆಚ್ಚಾಗಿ ಬಾಲ್ಯವಿವಾಹ ಪದ್ಧತಿ ಜಾರಿಯಲ್ಲಿರುವುದನ್ನು ಕಾಣುತ್ತೇವೆ. ಹೆಚ್ಚಾಗಿ ಮದುವೆ ಇವರ ಬಂಧು ಬಳಗದೊಳಗೆ ಏರ್ಪಡುತ್ತವೆ. ಇವರ ಜನಾಂಗದಲ್ಲಿ ಗಂಡಿನ ತಂದೆಯು ತನ್ನ ಮಗನು ಪ್ರಾಯಕ್ಕೆ ಬಂದ ಮೇಲೆ ಅವನಿಗೆ ಮದುವೆ ಮಾಡಲು ಹೆಣ್ಣನ್ನು ಹುಡುಕುತ್ತಾ ಊರಿಂದ ಊರಿಗೆ ಸಂಚರಿಸುತ್ತಾ ಹೆಣ್ಣಿರುವ ಕುಟುಂಬವನ್ನು ಪತ್ತೆ ಹಚ್ಚುತ್ತಾನೆ. ನಂತರ ಹೆಣ್ಣಿನ ತಂದೆಯನ್ನು ಅಥವಾ ಅಣ್ಣನನ್ನು ಕಂಡು ತನ್ನ ಬೆಡಗನ್ನು ತಿಳಿಸಿ ತನ್ನ ಬೇಡಿಕೆಯನ್ನು ಮುಂದಿಡುತ್ತಾನೆ. ಸಾಮಾನ್ಯವಾಗಿ ಒಂದೇ ಬೆಡಗಿಗೆ ಸೇರಿದ ಕುಟುಂಬಗಳ ನಡುವೆ ವೈವಾಹಿಕ ಸಂಬಂಧ ಏರ್ಪಡುವುದಿಲ್ಲ.

ಉದಾ: ಎಡವಲೊಳ್, ಸಂಕಲೊಳ್, ರುದ್ರಾಕ್ಷಿ, ವಿಭೂತಿ ಹಾಗೂ ಧೂಪ್‌ಮವಾಳ್ ಬೆಡಗು. ಇಲ್ಲಿ ತಿಳಿದು ಬರುವುದೇನೆಂದರೆ ಸಂಕಲೊಳ್ ಬೆಡಗಿನ ಎರಡು ಕುಟುಂಬಗಳಾಗಿದ್ದರೆ ಅವರು ಅಣ್ಣತಮ್ಮರಾಗುತ್ತಾರೆ. ಸಂಕೊಲೊಳ್, ರುದ್ರಾಕ್ಷಿ ಮತ್ತು ವಿಭೂತಿ ಬೆಡಗಿನ ಕುಟುಂಬಗಳ ನಡುವೆ ವೈವಾಹಿಕ ಸಂಬಂಧ ಏರ್ಪಡುತ್ತದೆ. ಗಂಡಿನ ಕುಟುಂಬವು ಸಂಕಲೊಳ್ ಬೆಡಗಿಗೆ ಸೇರಿದ್ದು ಹೆಣ್ಣಿನ ಕುಟುಂಬವು ರುದ್ರಾಕ್ಷಿ ಬೆಡಗಿಗೆ ಸೇರಿದ್ದರೆ ಇವೆರಡು ಕುಟುಂಬಗಳ ನಡುವೆ ಸಂಬಂಧ ಬೆಳೆಯುತ್ತದೆ. ಈ ಸಂದರ್ಭದಲ್ಲಿ ಹೆಣ್ಣಿನ ತಂದೆಯೊಂದಿಗೆ ಗಂಡಿನ ತಂದೆಯು ಮಾತುಕತೆ ಬೆಳೆಸಿ ಸಂಬಂಧ ಹೊಂದಾಣಿಕೆಯಾದರೆ, ಹುಡುಗ ಮತ್ತು ಹುಡುಗಿಯ ತಂದೆಗಳು ಜೊತೆಯಲ್ಲಿ ಕುಡಿದರೆಂದರೆ ಸಂಬಂಧ ಏರ್ಪಟ್ಟಂತೆಯೇ ಸರಿ. ಗಂಡು ಹೆಣ್ಣಿನ ತಂದೆ ತಾಯಿಗಳು ಪರಸ್ಪರ ಒಪ್ಪಿಕೊಂಡ ನಂತರ ಗಂಡಿನ ಕಡೆಯವರು ಹೆಣ್ಣಿನ ತಂದೆಯೊಂದಿಗೆ ಮಾತನಾಡಿ ನಾಳೆ ಚಾಪೆ ಹಾಸೋಣವೇ ಎನ್ನುತ್ತಾನೆ. ಆತನು ಆಗಲಿ ಎಂದರೆ ಮಾರನೆಯ ದಿನ ಬೆಳಿಗ್ಗೆ "ಯಡವಲಿ" ಅಥವಾ "ಮಾಂತು" (ಇವರನ್ನು ಕಟ್ಟಿಮನಿಯವರು ಎಂದು ಕರೆಯುತ್ತಾರೆ.) ಹೆಣ್ಣಿನ ಗುಡಾರದ ಮುಂದೆ ಚಾಪೆಯನ್ನು ಹಾಸುತ್ತಾನೆ. ಇವರು ಇಲ್ಲದಿದ್ದರೆ ಹಿರಿಯರು ಹಾಸುತ್ತಾರೆ. ನಂತರ ಎಲ್ಲಾ ಕುಲದ ನೆಂಟರು ಅಲ್ಲಿ ಕಲಿಯುತ್ತಾರೆ. ಆಗ ಎಲ್ಲರೂ ಕುಳಿತು ಮಾತನಾಡಿದ ನಂತರ ಇಬ್ಬರಿಗೆ ಒಪ್ಪಿಗೆಯಾದರೆ ಹೆಂಡವನ್ನು ತರಿಸುತ್ತಾರೆ. ಆಗ ಮಾತುಕತೆ ಮುಗಿದ ನಂತರ ಅಲ್ಲಿದ್ದ ಎಲ್ಲರಿಗೂ ಹೆಂಡ-ಸಾರಾಯಿಯನ್ನು ಕುಡಿಯಲು ಕೊಡುತ್ತಾರೆ. ಹೆಣ್ಣಿಗೆ ಬೇಕಾದ ಸೀರೆ, ಕುಪ್ಪಸ, ಎಲೆ, ಅಡಿಕೆ, ಕೊಬ್ಬರಿ, ಬೆಳ್ಳುಳ್ಳಿ ಇವೆಲ್ಲಾ ವಸ್ತುಗಳನ್ನು ಕಟ್ಟಿಮನಿಯವರು ಗಂಡಿನ ಕಡೆಯಿಂದ ಪಡೆದುಕೊಂಡು ಹೆಣ್ಣಿನ ತಂದೆಗೆ ಕೊಟ್ಟು ಎಲ್ಲರು ಹೆಂಡವನ್ನು ಕುಡಿದು ನಿಶ್ಚಿಕರಣ ಮುಗಿಯಿತು ಎಂದು ತಿಳಿಯುತ್ತಾರೆ. ಇಂತಿಷ್ಟು ದಿನಗಳ ನಂತರ ಮದುವೆ ಎಂದು ತೀರ್ಮಾನ ಮಾಡಿಕೊಂಡು ಹೋಗುತ್ತಾರೆ. ನಿಶ್ಚಿಕರಣದ ವೆಚ್ಚವನ್ನು ಗಂಡಿನವರು ತುಂಬುತ್ತಾರೆ. ನಂತರ ನಿಗದಿತ ದಿನದಲ್ಲಿ ಮದುವೆ ಆರಂಭವಾಗುತ್ತದೆ. ಮೊದಲು ಗಂಡಿನವರು ಹೆಣ್ಣಿನವರ ಕರಾರುಗಳನ್ನು ಒಪ್ಪಿಕೊಳ್ಳುವದು. ಅವರು ಕೇಳಿದಷ್ಟು ಹಣ ಅಥವಾ ತೆರವು ನೀಡುವದು, ಹೆಂಡ ಕೊಡುವುದು

ಮದುವೆಯಾದ ನಂತರ ಅಳಿಯ ಏಳು ದಿನ ಅಥವಾ ಎಂಟು ದಿನ ಮಾವನ ಮನೆಯಲ್ಲಿ ಇರುವುದು. ಈ ಎಲ್ಲ ಕರಾರುಗಳನ್ನು ಗಂಡಿನ ತಂದೆಯು ಒಪ್ಪಿಕೊಳ್ಳುತ್ತಾರೆ. ಇವರ ಉದ್ದೇಶ ಏನೆಂದರೆ ಗಂಡು ಮಾವನ ಮನೆಯಲ್ಲಿ ಸ್ವಲ್ಪದಿನ ಕಾಲ ಕಳೆದರೆ ಗಂಡಿನ ಗುಣ-ಅವಗುಣಗಳನ್ನು ಪರೀಕ್ಷೆ ಮಾಡಿ ಅವನು ತನ್ನ ಮಗಳನ್ನು ಚೆನ್ನಾಗಿ ನೋಡಿಕೊಳ್ಳುವನೋ ಅಥವಾ ಇಲ್ಲವೋ ಎನ್ನುವ ಉದ್ದೇಶದಿಂದ ಹೆಣ್ಣಿನ ತಂದೆಯು ಈ ಕರಾರುಗಳ ಒಪ್ಪಿಗೆಯನ್ನು ಪಡೆಯುತ್ತಾನೆ.

ಮದುವೆಯ ಸಂದರ್ಭದಲ್ಲಿ ಮದುಮಗಳನ್ನು ಬಹಿರಂಗವಾಗಿ ಕೂಡಿಸುತ್ತಾರೆ. ವಧುವನ್ನು ಮನೆಯೊಳಗೆ ಇಟ್ಟಿರುತ್ತಾರೆ. ನಂತರ ಮದುಮಗಳನ್ನು ಆಕೆಯ ಸೋದರಮಾವ ಹೊತ್ತುಕೊಂಡು ಬಂದು ಹಸೆಮಣೆಯ ಮೇಲೆ ಕೂಡಿಸುತ್ತಾನೆ. ಈ ಹಸೆಮಣೆಯು ಕರಿಕಂಬಳಿಯ ಮೇಲೆ ಅಕ್ಕಿಯಿಂದ ಚಿತ್ರವನ್ನು ತೆಗೆದು ಗದ್ದುಗೆಯ ರೂಪದಲ್ಲಿ ಹಾಸಿರುತ್ತಾರೆ. ಇದರ ಮೇಲೆ ತಂದು ಮದುಮಗಳನ್ನು ಕೂಡಿಸುತ್ತಾರೆ. ನಂತರ ಗಂಡಿನ ಸೋದರಮಾವ ಅವನನ್ನು ಹೊತ್ತುಕೊಂಡು ಬಂದು ವಧುವಿನ ಪಕ್ಕದಲ್ಲಿ ಕುಳಿಸುತ್ತಾನೆ. ಮದುವೆಯ ಸಂದರ್ಭದಲ್ಲಿ ತಮ್ಮ ಸಂಗೀತ ವಾದ್ಯಗಳಿಂದ ಭಜನೆಯನ್ನು ಹಾಡುತ್ತಾರೆ. ಮದುಲಿಂಗ ಮತ್ತು ಮದಲಗಿತ್ತಿಯನ್ನು ಹಸೆಮಣೆಯ ಮೇಲೆ ಕೂಡಿಸಿದ ನಂತರ ವೀಳ್ಯದ ಶಾಸ್ತ್ರ ನಡೆಯುತ್ತದೆ. ಐದು ಜನ ಹಿರಿಯರು ಸೇರಿ ವೀಳ್ಯವನ್ನು ಗಂಡಿನ ಕೈನಲ್ಲಿರಿಸಿ ನಂತರ ಹೆಣ್ಣಿನ ಕೈನಲ್ಲಿರಿಸಿ ನಂತರ ಹುಡುಗಿಯ ತಂದೆ ತಾಯಿಗೆ ಕೊಡುತ್ತಾರೆ. ಇದೇ ರೀತಿ ನೆರೆದ ದೈವಕ್ಕೆ ಕೊಡುತ್ತಾರೆ.

ವೀಳ್ಯದ ಎಡೆ ಶಾಸ್ತ್ರ ಆದ ನಂತರ ಒಬ್ಬ ಯಜಮಾನ, ಇಬ್ಬರು ಮುತ್ತೈದೆಯರು ಹಾಗು ಮದುಲಿಂಗ ಮದಲಗಿತ್ತಿ ಒಟ್ಟಿಗೆ ಐವರು ತಾಳಿಯನ್ನು ಮುಟ್ಟಿದ ನಂತರ, ಅದನ್ನು ದೈವಕ್ಕೆ ತೋರಿಸಿದ ನಂತರ ಹುಡುಗ ಹುಡುಗಿಯ ಕುತ್ತಿಗೆಗೆ ತಾಳಿಯನ್ನು ಕಟ್ಟುತ್ತಾನೆ. ನಂತರ ಮದುಮಕ್ಕಳು ಹೆಣ್ಣಿನ ಗುಡಾರ ಪ್ರವೇಶ ಮಾಡುತ್ತಾರೆ. ಈ ಸಂದರ್ಭದಲ್ಲಿ ಅಳಿಯ ಬಲಗಾಲು ಹೆಣ್ಣು ಎಡಗಾಲು ಇಟ್ಟು ಪ್ರವೇಶ ಮಾಡುತ್ತಾರೆ. ನಂತರ ಮಾರನೆಯದಿನ ಬೆಳಿಗ್ಗೆ ಎರಡು ಕಳಸ ತೆಗೆದುಕೊಂಡು ವಾದ್ಯ ಸಂಗೀತಗಳ ಮೇಳದಲ್ಲಿ ಮದಲಿಗಿತ್ತಿ ಮದಲಿಂಗನ ಜೊತೆ ಮಾವನ ಗುಡಾರಕ್ಕೆ ಬರುತ್ತಾಳೆ. ಈ ಸಂದರ್ಭದಲ್ಲಿ ಸೊಸೆ ಬಲಗಾಲು ಮುಂದಿಟ್ಟು ಮಗ ಎಡಗಾಲು ಮುಂದಿಟ್ಟು ಒಳಕ್ಕೆ ಪ್ರವೇಶ ಮಾಡುತ್ತಾರೆ. ಮಾರನೆಯದಿನ ಬೆಳಿಗ್ಗೆ ಶಾಸೆಕಟ್ಟೆಯನ್ನು ಹಾಕಿ ಹೆಣ್ಣು ಮತ್ತು ಗಂಡನ್ನು ಕೂಡಿಸಿ ಅಕ್ಕಿತೊಳೆದ ನೀರನ್ನು ಒಂದು ಮಡಿಕೆ ಅಥವಾ ಗಡಿಗೆಯಲ್ಲಿ ಹಾಕಿ ಗಡಿಗಿಯ ಕಂಠಕ್ಕೆ (ಕಲಿಕುಂಡ) ಕಂಕಣ ಕಟ್ಟುತ್ತಾರೆ. ನೀರಿನಲ್ಲಿ ಎರಡು ಉಂಗುರಗಳನ್ನು ಹಾಕುತ್ತಾರೆ. ಆಗ ಹೆಣ್ಣು ಮತ್ತು ಗಂಡನ್ನು ನೀರಿನಲ್ಲಿ ಉಂಗರವನ್ನು ಹುಡುಕಲು ಹಚ್ಚುತ್ತಾರೆ. ಈ ಸಂದರ್ಭದಲ್ಲಿ ಇಬ್ಬರಿಗೆ ತಲಾ ಒಂದೊಂದು ಉಂಗುರ ಸಿಕ್ಕರೆ ಒಳ್ಳೆಯದೆಂದು ಏನು ಸಿಗದಿದ್ದರೆ ಕೆಟ್ಟದೆಂದು ಭಾವಿಸಲಾಗುತ್ತದೆ. ಈ ಪದ್ಧತಿಯನ್ನು 'ಕಲಿಕುಂಡ' ಎನ್ನುತ್ತಾರೆ.[*] ಹೀಗೆ ಮೂರು ಬಾರಿ ಪ್ರಯತ್ನ ಮಾಡಲಾಗುತ್ತದೆ. ಸಾಮಾನ್ಯವಾಗಿ ಈ ಜನಾಂಗದಲ್ಲಿ

ಬಾಲ್ಯವಿವಾಹ ಜಾರಿಯಲ್ಲಿರುವುದರಿಂದ, ಹುಡುಗಿ ಮೈನೆರೆಯುವವರೆಗೆ ತಂದೆ ತಾಯಿಗಳ ಆಶ್ರಯದಲ್ಲಿರುತ್ತಾಳೆ. ಒಪ್ಪಂದದಂತೆ ಅವಧಿ ಮುಗಿದ ನಂತರ ಅಳಿಯ ಹೆಣ್ಣಿನ ಮನೆಯಲ್ಲಿ ಸ್ವಲ್ಪದಿನ ಕಾಲ ಕಳೆದು ನಂತರ ಹೆಂಡತಿಯನ್ನು ಕರೆದುಕೊಂಡು ತಂದೆ ತಾಯಿಗಳ ಮನೆಗೆ ಬರುತ್ತಾನೆ. ಸಾಮಾನ್ಯವಾಗಿ ಮದುವೆಯದಿನ ಎಲ್ಲ ಖರ್ಚುಗಳನ್ನು ಹೆಣ್ಣಿನ ಕಡೆಯವರು ತುಂಬಿಕೊಳ್ಳುತ್ತಾರೆ. ಬಾಕಿದಿನಗಳ ಖರ್ಚನ್ನು ಗಂಡಿನ ಕಡೆಯವರು ತುಂಬಿಕೊಳ್ಳುತ್ತಾರೆ. ಮದುವೆಯಾದ ಮರುದಿನ ಗಂಡಿನ ಕಡೆಯವರು ಕುಕ್ಕಡಿಬೇಟೆ ಮಾಡಿ ಕುಲಸ್ಥರಿಗೆಲ್ಲ ಊಟ ಮಾಡಿಸಿ, ಹೆಂಡ ಸಾರಾಯಿ ಕುಡಿಸಿ ಬಂದಂತಹ ಬಂಧುಬಳಗವನ್ನು ಅವರವರ ಊರುಗಳಿಗೆ ಬೀಳ್ಕೊಡುತ್ತಾರೆ. ಇವರ ಮದುವೆಯಲ್ಲಿ ಬ್ರಾಹ್ಮಣ ಶಾಸ್ತ್ರಿಗಳಾಗಲಿ, ಅಥವಾ ವೀರಶೈವ ಪೂಜಾರಿಗಳಾಗಲಿ ಪುರೋಹಿತ ಕೆಲಸ ಮಾಡಲು ಅವಕಾಶವಿಲ್ಲ. ಆದರೆ ವೇಷಗಾರರೆಂದು ಗುರುತಿಸಿಕೊಳ್ಳುವ ಸುಡಗಾಡ ಸಿದ್ಧರಲ್ಲಿ ಜಂಗಮರು ಪುರೋಹಿತ ಕೆಲಸ ಮಾಡಲು ಅವಕಾಶವಿದೆ. ಇದನ್ನು ನೋಡಿದಾಗ ವೀರಶೈವ ಮದುವೆಗಳ ಪ್ರಭಾವ ಇವರ ಮೇಲಾಗಿರುವುದು ನಮಗೆ ತಿಳಿದು ಬರುತ್ತದೆ. ಇತ್ತೀಚೆಗೆ ಬಾಲ ಸಂತರು, ಮತ್ತು ಸುಡಗಾಡ ಸಿದ್ಧರ ನಡುವೆ ವೇಷಗಾರರ ವೈವಾಹಿಕ ಸಂಬಂಧವೇರ್ಪಡುತ್ತಿರುವುದು ಕಂಡು ಬರುತ್ತದೆ. ನಾವೆಲ್ಲ ಒಂದೆ ಜಾತಿಗೆ ಸೇರಿದವರು ವೃತ್ತಿಯಲ್ಲಿ ಬೇರೆ ಬೇರೆ ವೃತ್ತಿಯನ್ನು ಅನುಸರಿಸುತ್ತಿದೇವೆ ಎಂದು ಹೇಳುತ್ತಾರೆ. ಸಾಮಾನ್ಯವಾಗಿ ಇವರ ಮದುವೆಗಳು ಸರಳ ರೀತಿಯಿಂದ ಕೂಡಿರುತ್ತವೆ ಮತ್ತು ಅಷ್ಟೆ ಕಟ್ಟುನಿಟ್ಟಾದ ನಿರ್ಬಂಧಗಳಿಂದ ನಡೆಯುತ್ತವೆ.

### ೬. ಉಡುಗೆ-ತೊಡುಗೆಗಳು

ಹಗಲುವೇಷಗಾರರು ಸಾಮಾನ್ಯವಾಗಿ ಬಹುಮಾನವಾಗಿ ಅಥವಾ ಭಿಕ್ಷೆಯಿಂದ ಪಡೆದ ಹಳೆಯಬಟ್ಟೆಗಳನ್ನು ಬಳಸುತ್ತಾರೆ. ಗಂಡಸರು ಕಲೆಯನ್ನು ಇಂತಿಷ್ಟು ದಿನಗಳು ಎಂದು ನಿಗದಿಮಾಡಿಕೊಂಡು ಪ್ರದರ್ಶನ ಮಾಡಿದ ನಂತರ ಕುಲಸ್ಥರೆಲ್ಲ ಸೇರಿಕೊಂಡು ಪಟ್ಟಿಯನ್ನು ಎತ್ತಲು ಊರೊಳೊಗೆ ಹೋಗುತ್ತಾರೆ. ಸಾಮಾನ್ಯವಾಗಿ ಊರಿನ ಜನರು ಇವರಿಗೆ ತಮ್ಮ ಹಳೆಯ ಬಟ್ಟೆಗಳನ್ನು, ಕೋಟುಗಳನ್ನು, ವಡವೆಗಳನ್ನು ಕೊಡುತ್ತಾರೆ. ಸಾಮಾನ್ಯವಾಗಿ ಇವು ವೈವಿಧ್ಯತೆಗಳಿಂದ ಕೂಡಿದ ಬಟ್ಟೆಗಳಾಗಿರುತ್ತವೆ. ಅದರಂತೆ ಹೆಣ್ಣುಮಕ್ಕಳು ಮನೆ ಮನೆಯನ್ನು ಸುತ್ತಿ ಹಾಡುತ್ತಾ, ಸೀರೆ, ಕುಪ್ಪಸ, ಮಕ್ಕಳಿಗೆ ಬೇಕಾದ ಬಟ್ಟೆಗಳನ್ನು ಹಾಗು ಒಡವೆಗಳನ್ನು ದಾನರೂಪದಲ್ಲಿ ಪಡೆದುಕೊಂಡು ಬರುತ್ತಾರೆ. ಸಾಮಾನ್ಯವಾಗಿ ಹಗಲುವೇಷದವರಿಗೆ ಒಡವೆಗಳನ್ನು ಧರಿಸುವಲ್ಲಿ ಆಸಕ್ತಿ ಕಡಿಮೆ ಇದ್ದರೂ ಬಟ್ಟೆಗಳನ್ನು ಧರಿಸುವಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಾರೆ. ವಯಸ್ಸಾದ ಮುದುಕರು ಉದ್ದವಾದ ಕೂದಲನ್ನು ಬಿಟ್ಟು ತಲೆಮೇಲೆ ತುರುಬ ಕಟ್ಟಿಕೊಂಡು ರುಮಾಲನ್ನು ಸುತ್ತುತ್ತಾರೆ. ಈ ರುಮಾಲು ಬಹಳ ಬೆಲೆಯುಳ್ಳದಾಗಿರುತ್ತದೆ ಮತ್ತು ಬಿಳಿಪಂಚೆಯನ್ನು ಧರಿಸುತ್ತಾರೆ. ಉದ್ದನೆಯ ಅಂಗಿಯನ್ನು ಹಾಕಿಕೊಳ್ಳುತ್ತಾರೆ, ಮೇಲೆ ಕರಿಬಣ್ಣದ ಕೋಟನ್ನು ಹಾಕುತ್ತಾರೆ,

ಕೈಯಲ್ಲಿ ಕೋಲನ್ನು ಹಿಡಿದಿರುತ್ತಾರೆ. ಯುವಕರು, ಮಧ್ಯವಯಸ್ಸಿನ ಗಂಡಸರು ತಲೆಯ ಕೂದಲನ್ನು ಕೆಳಮಟ್ಟದವರೆಗೆ ಬೆನ್ನಿನ ಮೇಲೆ ಇಳಿ ಬೀಳುವಂತೆ ಬಿಟ್ಟಿರುತ್ತಾರೆ. ದಪ್ಪನೆಯ ಮೀಸೆಯನ್ನು ಬಿಟ್ಟಿರುತ್ತಾರೆ. ಈ ಕೂದಲನ್ನು ಬೆನ್ನಿನಮಟ್ಟ ಬಿಡಲು ಕಾರಣವೆಂದರೆ ವೇಷ ಧರಿಸಲು ತುಂಬಾ ಸಹಕಾರಿಯಾಗುತ್ತವೆ. ಯುವಕರು ಸಾಮಾನ್ಯವಾಗಿ ಬಿಳಿಪಂಚೆಯನ್ನು ಧರಿಸುತ್ತಾರೆ. ಮಂಡ ಅಂಗಿ, ಅಥವಾ ಜುಬ್ಬ ಅಂಗಿ ಧರಿಸುತ್ತಾರೆ. ಹೆಗಲಮೇಲೆ ಒಂದು ವಲ್ಲಿಯನ್ನು ಹಾಕುತ್ತಾರೆ. ಇತ್ತೀಚೆಗೆ ಯುವಕರು ಆಧುನಿಕತೆಗೆ ಹೊಂದಿಕೊಂಡಂತೆ ಬಣ್ಣದ ಅಂಗಿಗಳನ್ನು, ಲುಂಗಿಗಳನ್ನು ಧರಿಸುತ್ತಾರೆ. ವೇಷಧರಿಸುವ ಗಂಡಸರು ತಪ್ಪದೆ ತಮ್ಮ ಕೂದಲಿಗೆ ಕೊಬ್ಬರಿ ಎಣ್ಣೆ ಹಚ್ಚಿಕೊಂಡು ಹಿಂದಕ್ಕೆ ಬಾಚಿಕೊಳ್ಳುತ್ತಾರೆ. ಹೆಣ್ಣುಮಕ್ಕಳು ಸೀರೆಯನ್ನು ಮೇಲೆ ರವಿಕೆಯನ್ನು ಧರಿಸುತ್ತಾರೆ. ಹೆಚ್ಚಾಗಿ ಊರು ಸುತ್ತಿ ತಂದ ಹಳೆಯ ಬಟ್ಟೆಗಳನ್ನು ಧರಿಸುವುದರಿಂದ ಇವು ಅರಕಲು ಬಟ್ಟೆಗಳಾಗಿರುತ್ತವೆ. ಇತ್ತೀಚೆಗೆ ಹಳೆಯ ಬಟ್ಟೆಗಳನ್ನು ಕೊಡುವ ಜನತೆ ಕಡಿಮೆಯಾಗಿರುವುದು ಇವರಿಗೆ ಕೊರಗಾಗಿದೆ. ಮಕ್ಕಳಿಗೆ ಹಿರಿಯರು ಊರಲ್ಲಿ ತಂದ ದೊಡ್ಡಗಾತ್ರದ ಬಟ್ಟೆಗಳನ್ನು ತೊಡಿಸುತ್ತಾರೆ. ಇವರು ಪಾದರಕ್ಷೆಗಳನ್ನು ತೊಡುವದು ತುಂಬಾ ಕಡಿಮೆ. ಸಾಮಾನ್ಯವಾಗಿ ಈ ಜನತೆ ಧರಿಸುವ ಒಡವೆ ವಸ್ತುಗಳೆಂದರೆ ಹೆಂಗಸರು ಕಿವಿಗೆ ಓಲೆ, ಬೆಂಡೋಲೆ, ಮೂಗುತಿ, ಕೈಗೆ ಕಡಗಗಳು, ತೋಳಬಂದಿ, ಕಾಲಲ್ಲಿ ಚೈನು, ಕೈ ಉಂಗುರ, ಕಾಲುಂಗರ, ಡಾಬು, ಡೊಂಕಕ್ಕೆ ಧರಿಸುತ್ತಾರೆ. ಇವು ಹೆಚ್ಚಾಗಿ ಬೆಳ್ಳಿ ಬಂಗಾರದವುಗಳಾಗಿರುತ್ತವೆ. ಬಹುಪಾಲು ಒಡವೆಗಳು ಬೆಳ್ಳಿಯವಾಗಿರುತ್ತವೆ. ಕೆಲವೊಬ್ಬರು ಊರಲ್ಲಿ ಕಥೆಗಳನ್ನು ಹೇಳಿದಾಗ ದಾನ ರೂಪದಲ್ಲಿ ಬಂದ ಒಡವೆಗಳನ್ನು ಧರಿಸುತ್ತಾರೆ. ಗಂಡಸರು ಧರಿಸುವ ಒಡವೆಗಳೆಂದರೆ ರಟ್ಟೆಗಡಗ, ಕಿವಿಯಲ್ಲಿ ಮುರುವು, ಕೈಯಲ್ಲಿ ಉಂಗುರ, ಕೊರಳಲ್ಲಿ ಬೆಳ್ಳಿ ತಾಯತಗಳು, ಕೈಗೆ ಗಡಿಯಾರ, ಕಡಗ, ಮುಂತಾದವುಗಳನ್ನು ಧರಿಸುತ್ತಾರೆ. ಮಕ್ಕಳಿಗೆ ಕೈಗೆ ಕರಿಮಣಿ ಸರ, ಟೊಂಕಕ್ಕೆ ಬೆಳ್ಳಿ ಉಡದಾರ, ಕಾಲಲ್ಲಿ ಕಡಗ, ಕಿವಿಯಲ್ಲಿ ರಿಂಗು ಮುಂತಾದುವುಗಳನ್ನು ಹಾಕುತ್ತಾರೆ.[೬]

ಒಟ್ಟಿನಲ್ಲಿ ಹೇಳುವುದಾದರೆ ಹಗಲುವೇಷಗಾರರ ಒಡವೆ-ವಸ್ತ್ರಗಳು ಸಾಂಪ್ರದಾಯಿಕ ರೀತಿಯದ್ದೇ ಆಗಿವೆ. ಹೊಸ ತಲೆಮಾರು ಆಧುನಿಕತೆಯತ್ತ ಹೆಜ್ಜೆ ಹಾಕಿದರೂ ಅದು ಮಹತ್ತರ ಬದಲಾವಣೆಯನ್ನೇನೂ ತಂದಿಲ್ಲ.

## ೭. ಆಹಾರ ಪದ್ಧತಿ

ಹಗಲುವೇಷಗಾರರು ಮುಖ್ಯವಾಗಿ ಮಾಂಸಹಾರಿಗಳು. ಇವರು ಆಹಾರವನ್ನು ಭಿಕ್ಷಾಟನೆ, ಬೇಟೆ, ಪ್ರಾಣಿಗಳನ್ನು ಸಾಕುವುದರ ಮುಖಾಂತರ ಸಂಗ್ರಹಿಸಿಕೊಳ್ಳುತ್ತಾರೆ. ಇವರು ಮನೆಯಲ್ಲಿ ಅಡಿಗೆ ತಯಾರಿಸಿಕೊಳ್ಳುವುದು ತುಂಬಾ ಕಡಿಮೆ. ಹೆಣ್ಣು, ಮಕ್ಕಳು ಮುಂಜಾನೆ ಎದ್ದು, ತಮ್ಮ ಸಂಗೀತವಾದ್ಯಗಳಾದ

ಬುಡ್ಗ, ಗಗ್ಗರ, ವೀಣೆಯಾಕಾರದ ತಂಬೂರಿ ಇವುಗಳನ್ನು ತೆಗೆದುಕೊಂಡು ಕೊಂಕುಳಲ್ಲಿ ಒಂದು ಜೋಳಿಗೆಯನ್ನು ಹಾಕಿಕೊಂಡು ಊರೊಳಗೆ ಪ್ರವೇಶ ಮಾಡಿ ಮನೆ ಮನೆಯ ಮುಂದೆ ಹಾಡಿ ದೊರೆತ ದವಸಧಾನ್ಯಗಳನ್ನು ಹಾಗೂ ಆಹಾರವನ್ನು ಸಂಗ್ರಹಿಸಿಕೊಂಡು ತಂದ ನಂತರ ಮನೆಯಲ್ಲಿ ಎಲ್ಲರೂ ಒಟ್ಟಿಗೆ ಕುಳಿತುಕೊಂಡು ಊಟ ಮಾಡುತ್ತಾರೆ. ಗಂಡಸರು ವೇಷಹಾಕಿಕೊಂಡು ಇಂತಿಷ್ಟು ದಿನಗಳ ಅವಧಿಯನ್ನು ನಿಗದಿಪಡಿಸಿಕೊಂಡು, ದಿನಕ್ಕೊಂದು ವೇಷದಂತೆ ವೇಷಗಳನ್ನು ಹಾಕಿಕೊಂಡು ಮನೆ ಮನೆಯ ಮುಂದೆ ಕಲೆಯನ್ನು ಪ್ರದರ್ಶನ ಮಾಡುತ್ತಾರೆ. ಪ್ರದರ್ಶನದ ಅವಧಿ ಮುಗಿದ ನಂತರ ಊರಲ್ಲಿ ಪಟ್ಟಿಯ ರೂಪದಲ್ಲಿ ಧಾನ್ಯಗಳನ್ನು, ಹಣವನ್ನು ಸಂಗ್ರಹಿಸಿಕೊಂಡು ತಮ್ಮ ಜೀವನವನ್ನು ಸಾಗಿಸುತ್ತಾರೆ. ಅಲ್ಲದೆ ಪ್ರಾಣಿಗಳನ್ನು ಸಾಕುವುದರಿಂದ ತಮ್ಮ ಜೀವನವನ್ನು ಸಾಗಿಸುತ್ತಾರೆ. ಮೇಕೆಗಳನ್ನು, ಕುರಿಗಳನ್ನು, ಹಸುಗಳನ್ನು, ಕೋಳಿಗಳನ್ನು ಸಾಕುವುದರಿಂದ ಅವರಿಗೆ ಹಾಲು, ಮೊಸರು, ತುಪ್ಪ, ಮಜ್ಜಿಗೆ, ಮಾಂಸ ದೊರೆಯುತ್ತದೆ. ಬೇಟೆಯಿಂದ ಈ ಸಮುದಾಯವು ಹೆಚ್ಚು ಆಹಾರವನ್ನು ಸಂಗ್ರಹಿಸುತ್ತದೆ. ಇವರು ತಮ್ಮ ಮಾಂಸಹಾರ ಸೇವನೆಯಲ್ಲಿ ಸಾಮಾನ್ಯವಾಗಿ ಮೊಲ, ಉಡ, ಮುಂಗೂಸಿ, ಅಡವಿ ಬೆಕ್ಕು, ಪುನಿಗನ ಬೆಕ್ಕು, ಮರನಾಗಿ, ಜಿಂಕೆ, ಮೇಕೆ, ಕುರಿ, ಮುಳ್ಳುಹಂದಿ, ನರಿ, ತೋಳ, ಆಮೆ, ಏಡಿ, ಮೀನು ಪಕ್ಷಿಗಳಲ್ಲಿ ಕೌಜುಗ, ಪಾರಿವಾಳ, ಕೋಳಿ, ನೀರುಕೋಳಿ, ಬುರ್ಲಿ ಮುಂತಾದವುಗಳನ್ನು ತಿನ್ನುತ್ತಾರೆ.[೭] ಆದರೆ ಹಂದಿ ಮತ್ತು ದನದ ಮಾಂಸವನ್ನು ಅವರು ತಿನ್ನುವುದಿಲ್ಲ. ಶಿವ, ವಿಷ್ಣು, ಬ್ರಹ್ಮ, ಲಕ್ಷ್ಮಿ, ಸರಸ್ವತಿ, ಪಾರ್ವತಿ ಮೊದಲಾದ ಪವಿತ್ರ ದೇವತೆಗಳ ವೇಷಗಳನ್ನು ಹಾಕುವುದರಿಂದ ಮಡಿ ಮೈಲಿಗೆ ದೃಷ್ಟಿಯಿಂದ ಅದನ್ನು ತಿನ್ನಬಾರದು ಎನ್ನುವುದು ಅವರ ನಂಬಿಕೆ. ಒಂದು ವೇಳೆ ಹಂದಿ ಅಥವಾ ದನದ ಮಾಂಸವನ್ನು ತಿಂದು ಗುಡಾರಗಳಲ್ಲಿ ಸೇರಿಕೊಂಡರೆ ತಿಂದವರು ವಾಂತಿ-ಭೇದಿ ಕಾಯಿಲೆಗೆ ಗುರಿಯಾಗುತ್ತಾರೆ. ಅಲ್ಲದೆ ಸತ್ತು ಹೋಗುತ್ತಾರೆ ಎನ್ನುವ ನಂಬಿಕೆಯು ಇದೆ.

ಮಾಂಸದ ಜೊತೆಗೆ ಮದ್ಯಪಾನದ ಸೇವನೆ ಇರುತ್ತದೆ. ಸಾಮಾನ್ಯವಾಗಿ ಎಲ್ಲ ಗಂಡಸರು ಮತ್ತು ಹೆಂಗಸರು ಮದ್ಯಪಾನವನ್ನು ಸೇವಿಸುತ್ತಾರೆ. ವಯಸ್ಸಾದವರು ಭಂಗಿಯನ್ನು ಸೇದುತ್ತಾರೆ. ಹೊಗೆಸೊಪ್ಪನ್ನು ಸಣ್ಣಾಗಿ ಪುಡಿ ಮಾಡಿ, ಚಿಲುಮೆಯಲ್ಲಿ ತುಂಬಿ ಚಿಲುಮೆಯ ಸಣ್ಣ ಬಾಯಿಗೆ ನೀರಿನಲ್ಲಿ ಅದ್ದಿ ಹಿಂಡಿದ ಬಟ್ಟೆಯಿಂದ ಅಡ್ಡಲಾಗಿ ಮುಚ್ಚಿ ಬಾಯಿಗೆ ಇಟ್ಟುಕೊಂಡು ಎರಡು-ಮೂರು ನಿಮಿಷಗಳ ಕಾಲ ಉಸಿರು ಬಿಡದಂತೆ ಜೋರಾಗಿ ಭಂಗಿಯನ್ನು ಎಳೆಯುತ್ತಾರೆ. ಇವರು ತಮ್ಮ ಆಹಾರ ತಯಾರಿಸುವಿಕೆಯಲ್ಲಿ ಹೆಚ್ಚಾಗಿ ಹಗುರವಾದ ಪಾತ್ರೆಗಳನ್ನು ಬಳಸುತ್ತಾರೆ. ಏಕೆಂದರೆ ಇವರು ಅಲೆಮಾರಿಗಳಾಗಿರುವುದರಿಂದ ಹಗುರವಾದ ಪಾತ್ರೆಗಳು ಊರಿಂದ-ಊರಿಗೆ ಸಾಗಿಸಲು ಅನುಕೂಲಕರವಾಗಿರುತ್ತವೆ. ಇವರು ಕಾರ ಅಥವಾ ಚಟ್ನಿ ಅರಿಯಲು ಮಣ್ಣಿನಿಂದ ತಯಾರಿಸಿದ ಒಳ್ಳಿನ ಆಕಾರದ ಮಡಕೆಯನ್ನು ಬಳಸುತ್ತಾರೆ. ಅಲ್ಲದೆ ಮರದ ತೊಟ್ಟಿನಿಂದ ತಯಾರಿಸಿದ ಉದ್ದದ ಇಡಿ ಮುಂದೆ ಗುಂಡಿನ ಆಕಾರದಂತೆ ಇರುವ ಹುಟ್ಟನ್ನು

ಬಳಸುತ್ತಾರೆ. ಇವರು ಆಹಾರ ಸಂಗ್ರಹಣೆಯಲ್ಲಿ ಮಚ್ಚು ಹಾಗು ಕೊಡಲಿ ಹತಾರಿಗಳನ್ನು ಬಳಸುತ್ತಾರೆ. ಇವು ಸಾಮಾನ್ಯವಾಗಿ ಹಗುರದಿಂದ ಕೂಡಿರುತ್ತದೆ. ತಮ್ಮ ದವಸ ಧಾನ್ಯಗಳನ್ನು ಕುಟ್ಟಲು, ಬೀಸಲು ಊರಿನ ಯಾವುದಾದರೂ ಮನೆಯ ಮುಂದಿನ ಒಳಕಲ್ಲು, ಬೀಸಕಲ್ಲುಗಳನ್ನು ಬಳಸಬೇಕಿತ್ತು. ಇತ್ತೀಚೆಗೆ ಅವುಗಳ ಸ್ಥಾನದಲ್ಲಿ ಅಕ್ಕಿ ಗಿರಣಿ, ಹಿಟ್ಟಿನ ಗಿರಣಿ ತುಂಬಿಕೊಂಡಿವೆ. ಒಟ್ಟಿನಲ್ಲಿ ಹಗಲು ವೇಷಧಾರಿಗಳು ತಮ್ಮ ಆಹಾರ ಸಂಗ್ರಹಣಾ ವಿಧಾನದಲ್ಲಿ ಹಿಂದಿನ ವ್ಯವಸ್ಥೆಯನ್ನೇ ಉಳಿಸಿಕೊಂಡು ಬಂದಿರುವುದು ಕಂಡು ಬರುತ್ತದೆ.

### ೮. ವಸತಿ ವ್ಯವಸ್ಥೆ

ಹಗಲುವೇಷಗಾರರು ಹೆಚ್ಚಾಗಿ ಅಲೆಮಾರಿಗಳಾಗಿರುವುದರಿಂದ ವರ್ಷದಲ್ಲಿ ಒಂದೆರಡು ತಿಂಗಳು ಒಂದೊಂದು ಊರಿನಲ್ಲಿ ನೆಲೆ ನಿಲ್ಲುವವರಾಗಿದ್ದಾರೆ. ಎಲ್ಲಿ ಒಂದೆರಡು ತಿಂಗಳು ಕಾಲ ಕಳೆಯುತ್ತಾರೋ ಅದೇ ತಮ್ಮ ಸ್ವಂತ ಊರೆಂದು ಭಾವಿಸಿಕೊಳ್ಳುತ್ತಾರೆ. ಈ ಸಂದರ್ಭದಲ್ಲಿ ಅವರು ತಮ್ಮ ವಾಸಕ್ಕಾಗಿ ಗುಡಾರಗಳನ್ನು ಹಾಕಿಕೊಳ್ಳುತ್ತಾರೆ. ಊರಿನ ಹೊರ ಪ್ರದೇಶದಲ್ಲಿ ಅಥವಾ ಶಾಲೆ ಮೈದಾನದಲ್ಲಿ ನೀರಿನ ಸೌಲಭ್ಯಕ್ಕೆ ಹತ್ತಿರವಿರುವ ಬಯಲು ಪ್ರದೇಶದಲ್ಲಿ ತಮ್ಮ ವಾಸದ ಗುಡಾರಗಳನ್ನು ಹಾಕಿಕೊಳ್ಳುತ್ತಾರೆ. ಯಾವುದೇ ಕಾರಣಕ್ಕೆ ಊರಿನ ದೇವಸ್ಥಾನದ ಹತ್ತಿರ ಗುಡಾರಗಳನ್ನು ಹಾಕಿಕೊಳ್ಳುವುದಿಲ್ಲ. ಮಡಿ-ಮೈಲಿಗೆ ದೃಷ್ಟಿಯಿಂದ ಅಲ್ಲದೆ ಊರಿನ ಜನರ ಕಿರುಕುಳದ ಭಾವನೆಯಿಂದ ಊರಿನ ಹೊರವಲಯಗಳಲ್ಲಿ ತಮ್ಮ ಗುಡಾರಗಳನ್ನು ಹಾಕಿಕೊಳ್ಳುತ್ತಾರೆ ಎಂದು ಹೇಳುತ್ತಾರೆ. ಮಳೆ, ಬಿರುಗಾಳಿ ಸಂದರ್ಭದಲ್ಲಿ ಶಾಲಾ ಕಟ್ಟಡಗಳಲ್ಲಿ, ಶಾಲಾ ಕಟ್ಟಡಗಳು ದೊರಕದ ಸಂದರ್ಭದಲ್ಲಿ ದೇವಸ್ಥಾನಗಳ ಪಡಶಾಲೆಯಲ್ಲಿ ಮಳೆ, ಬಿರುಗಾಳಿ ನಿಲ್ಲುವ ತನಕ ಆಶ್ರಯ ಪಡೆಯುತ್ತವೆ ಎಂದು ಹೇಳುತ್ತಾರೆ. ಇವರು ತಮ್ಮ ಗುಡಾರಗಳನ್ನು ಕುಟುಂಬದ ಗಾತ್ರಕ್ಕೆ ಅನುಗುಣವಾಗಿ ಹಾಕಿಕೊಳ್ಳುತ್ತಾರೆ. ಸಣ್ಣ ಕುಟುಂಬ ಇದ್ದರೆ ೬ ಅಡಿ ಉದ್ದ, ೭ ಅಡಿ ಅಗಲ, ದೊಡ್ಡ ಕುಟುಂಬ ಇದ್ದರೆ ೯ ಅಡಿ ಉದ್ದ, ೮ ಅಡಿ ಅಗಲ ಈ ರೀತಿಯ ಅಳತೆಯ ಗುಡಾರಗಳನ್ನು ಹಾಕಿಕೊಳ್ಳುತ್ತಾರೆ. ಗುಡಾರದ ಎತ್ತರ ಸಾಮಾನ್ಯವಾಗಿ ೪ ರಿಂದ ೫ ಅಡಿ ಎತ್ತರವಿರುತ್ತದೆ. ಸಾಮಾನ್ಯವಾಗಿ ಈ ಜನಾಂಗದಲ್ಲಿ ವಿಭಕ್ತ ಕುಟುಂಬ ಪದ್ಧತಿ ಇರುವುದರಿಂದ ಹೆಚ್ಚಾಗಿ ಸಣ್ಣ ಗಾತ್ರದ ಗುಡಾರಗಳನ್ನು ಕಾಣಬಹುದು. ಇವರ ವಾಸದ ಗುಡಾರಗಳು ಸಾಮಾನ್ಯವಾಗಿ ಅರ್ಧವೃತ್ತಾಕಾರದಲ್ಲಿರುತ್ತವೆ. ಸುಮಾರು ನಾಲ್ಕು-ಐದು ಅಡಿ ಎತ್ತರವಿರುವ ಬಿದಿರುಗೂಟಗಳನ್ನು ನಿಲ್ಲಿಸಿ ಅವುಗಳ ಎರಡು ತುದಿಗಳನ್ನು ಸೇರಿಸುವಂತೆ ಒಂದು ಬಿದಿರಿನ ಉದ್ದನೆಯ ಕೋಲನ್ನು ದಾರದಿಂದ ಕಟ್ಟುತ್ತಾರೆ. [illegible] ಬಿದಿರು ಕಡ್ಡಿಗಳನ್ನು ಗುಡಾರದ ಕೌದಿಗೆ ಹೊಂದಿಕೊಂಡಿರುವಂತೆ ಒಳಗಿನಿಂದ ಬಾಗಿಸಿ ಮೇಲೆ ಅಡ್ಡಕಟ್ಟಿರುವ ಬಿದಿರಿಗೆ ಕಟ್ಟುವುದರಿಂದ ಗುಡಾರದ ಒಳಗೆಲ್ಲಾ ಒಂದೇ ರೀತಿಯ ವಿಸ್ತೀರ್ಣ

ಉಂಟಾಗುತ್ತದೆ. ಕೌದಿಯನ್ನು ಮುಚ್ಚಿರುತ್ತಾರೆ. ಒಂದು ಕಡೆ ಬಾಗಿಲು ರೂಪದಲ್ಲಿ ತೆರೆದಿರುತ್ತದೆ. ಕೌದಿಗಳನ್ನು ಊರಲ್ಲಿ ಕೊಟ್ಟ ಹಳೆಬಟ್ಟೆಗಳಿಂದ ಒಂದರಂತೆ ಒಂದನ್ನು ಜೋಡಿಸಿ ಸೂಜಿ ದಾರದಿಂದ ಹೊಲಿದು ಸಿದ್ಧಪಡಿಸಿಕೊಳ್ಳುತ್ತಾರೆ. ಗುಡಾರದ ಹೊರಗೆ ಅಂದರೆ ಗುಡಾರದ ಹಿಂದೆ ಸ್ನಾನ ಮಾಡಲು ಒಂದು ಬಂಡೆಯನ್ನು ಹಾಕಿಕೊಳ್ಳುತ್ತಾರೆ. ಗಂಡಸು ಮಕ್ಕಳು ಯಾವುದೇ ಮರೆ ಇಲ್ಲದೆ ಜಳಕ ಮಾಡುತ್ತಾರೆ. ಆದರೆ ಹೆಣ್ಣು ಮಕ್ಕಳು ಜಳಕ ಮಾಡುವ ವೇಳೆಯಲ್ಲಿ ಒಂದು ಹಳೆ ಸೀರೆಯನ್ನು ಅಡ್ಡಲಾಗಿ ಬಂಡೆಯ ಸುತ್ತ ಊಳಿದ ಎರಡು ಕಟ್ಟಿಗೆಗಳಿಗೆ ಸುತ್ತಿಕೊಂಡು ಜಳಕ ಮಾಡುತ್ತಾರೆ. ಗುಡಾರದ ಸುತ್ತ ಮಣ್ಣನ್ನು ಬೋದಿನಂತೆ ಮಾಡಿ ಮಳೆ ಬಂದಾಗ ನೀರು ಗುಡಾರದ ಒಳಗೆ ನುಗ್ಗದಂತೆ ಗುಡಾರದ ಸುತ್ತ ಕಾಲುವೆ ರೂಪದಲ್ಲಿ ನಾಲೆಗಳನ್ನು ಮಾಡಿರುತ್ತಾರೆ. ಇತ್ತೀಚೆಗೆ ಕೌದಿಯ ಬದಲಾಗಿ ಪ್ಲಾಸ್ಟಿಕ್ ಚೀಲಗಳನ್ನು ಹರಿದು ಒಂದರಂತೆ ಒಂದನ್ನು ಜೋಡಿಸಿ ಸೂಜಿದಾರದಿಂದ ಹೊಲಿದು ಗುಡಾರ ನಿರ್ಮಿಸಿಕೊಳ್ಳುವುದು ಕಂಡು ಬರುತ್ತದೆ. ಮಳೆಯಿಂದ ರಕ್ಷಣೆ ಪಡೆಯುವುದಕ್ಕೋಸ್ಕರ ಪ್ಲಾಸ್ಟಿಕ್ ಕಾಗದವನ್ನು ಗುಡಾರದ ನಿರ್ಮಾಣದಲ್ಲಿ ಹೆಚ್ಚು ಬಳಕೆ ಮಾಡುವುದು ಕಂಡು ಬರುತ್ತದೆ. ಇವರ ಗುಡಾರದ ಬಾಗಿಲು ಸಾಮಾನ್ಯವಾಗಿ ಪೂರ್ವದಿಕ್ಕಿಗೆ ಇರುತ್ತದೆ. ದನಕರುಗಳನ್ನು ಗುಡಾರದ ಮುಂದೆ ಎಂಟು ಹತ್ತು ಅಡಿ ದೂರದಲ್ಲಿ ಗೂಟಗಳನ್ನು ನೆಟ್ಟು ಕಟ್ಟುತ್ತಾರೆ. ಕೋಳಿಗಳನ್ನು ಗುಡಾರದ ಮುಂದೆ ಬಿದಿರಿನಿಂದ ಹೆಣೆದ ಬುಟ್ಟಿಯಲ್ಲಿ ಮುಚ್ಚಿಡುತ್ತಾರೆ. ವೇಷದ ಸಾಮಾನುಗಳನ್ನು ಗುಡಾರದ ಒಳಗೆ ಒಂದು ಹಳೆಯ ಬಟ್ಟೆಯಲ್ಲಿ ಕಟ್ಟಿಡುತ್ತಾರೆ. ಕೆಲವೊಬ್ಬರು ಅವುಗಳನ್ನು ಒಂದು ಗೂಟಕ್ಕೆ ನೇತು ಹಾಕಿಡುತ್ತಾರೆ. ಗುಡಾರದ ಮುಂದೆ ಸ್ವಲ್ಪ ಬಲಗಡೆಗೆ ಮೂರು ಕಲ್ಲುಗಳನ್ನು ಇಟ್ಟುಕೊಂಡು ಒಲೆಯನ್ನು ನಿರ್ಮಿಸಿಕೊಂಡಿರುತ್ತಾರೆ. ಇವರು ಹೆಚ್ಚಾಗಿ ಗುಂಪುಗಳಲ್ಲಿ ವಾಸಿಸುತ್ತಾರೆ. ಒಂದು ಗುಂಪಿನಲ್ಲಿ ಸಾಮಾನ್ಯವಾಗಿ ರಕ್ತ ಸಂಬಂಧಿಗಳು ಹೆಚ್ಚಾಗಿ ವಾಸಿಸುತ್ತಾರೆ. ಇವರು ಗುಡಾರದ ಒಳಗೆ ನೆಲದ ಮೇಲೆ ಮಣ್ಣಾಗದಂತೆ ದನದ ಸಗಣಿಯಿಂದ ಸಾರಿಸಿಕೊಳ್ಳುತ್ತಾರೆ. ಗುಡಾರಗಳಿಗೆ ಯಾವುದೇ ಅಂದ-ಚೆಂದ ಮಾಡಿರುವುದಿಲ್ಲ. ಇವರು ಹಬ್ಬಗಳನ್ನೆ ಆಚರಿಸುವುದಿಲ್ಲ ಎಂದ ಮೇಲೆ ಗುಡಾರಗಳನ್ನು ಸಿಂಗರಿಸುವ ಪ್ರಶ್ನೆಯೇ ಬರುವುದಿಲ್ಲ. ಇತ್ತೀಚೆಗೆ ಸರಕಾರವು ಅಲ್ಲೊಂದು ಇಲ್ಲೊಂದು ಎನ್ನುವಂತೆ ಜನತಾ ಮನೆಗಳನ್ನು ದೊರಕಿಸಿಕೊಟ್ಟಿರುವುದನ್ನು ಕಾಣಬಹುದಾಗಿದೆ. ಇದರಿಂದ ಅನಿವಾರ್ಯವಾಗಿ ತಾವು ವಾಸ ಮಾಡುವ ಮನೆ, ಪರಿಸರವನ್ನೇ, ತಮ್ಮ ಸ್ವಂತ ಊರು ಎಂಬುದಾಗಿ ಕರೆದುಕೊಳ್ಳುವಂತಾಯಿತು. ಸಾಮಾನ್ಯವಾಗಿ ಇವರು ಗುಡಾರಗಳನ್ನು ಊರು ಹೊರಗಿನ ಬಯಲು ಪ್ರದೇಶದಲ್ಲಿ ಹಾಕಿಕೊಳ್ಳುವುದರಿಂದ ಆ ಪ್ರದೇಶವು ಹೆಚ್ಚು ಸ್ವಚ್ಛತೆಯಿಂದ ಕೂಡಿರುವುದಿಲ್ಲ, ಸುತ್ತ ಬೇಲಿಗಳು, ಕಸದ ಗುಂಡಿಗಳು ಇರುತ್ತವೆ. ಆದರೆ ಅದನ್ನೇ ಅವರು ಒಳ್ಳೆಯ ಪ್ರದೇಶವೆಂದು ಭಾವಿಸಿಕೊಳ್ಳುತ್ತಾರೆ. ಇವರು ಹಾಸಿಕೊಳ್ಳಲು ಈಚಲು ಗರಿಯ ಚಾಪೆಗಳನ್ನು ಬಳಸುತ್ತಾರೆ. ಈ ಚಾಪೆಗಳನ್ನು ಇವರ ಹೆಣ್ಣುಮಕ್ಕಳೆ ಹೆಣೆದಿರುತ್ತಾರೆ. ಇತ್ತೀಚೆಗೆ

ಪ್ಲಾಸ್ಟಿಕ್ ಕಾಗದಗಳನ್ನು ಹಾಸಿಕೊಳ್ಳಲು ಬಳಸುವುದನ್ನು ಕಾಣುತ್ತೇವೆ. ಇವರ ಗುಡಾರಗಳಿಗೆ ಯಾವುದೇ ವಿದ್ಯುತ್ ವ್ಯವಸ್ಥೆ ಇರುವುದಿಲ್ಲ. ಕಂದಿಲುಗಳನ್ನು ಬಳಸುವುದನ್ನು ಕಾಣಬಹುದು. ಒಟ್ಟಿನಲ್ಲಿ ಹಗಲುವೇಷದವರ ವಸತಿ ವ್ಯವಸ್ಥೆ ತೀರಾ ಹದಗೆಟ್ಟಿದ್ದು, ಕಷ್ಟದ ಬದುಕನ್ನು ಸಾಗಿಸುವಂತೆ ಮಾಡಿದೆ. ಇವರು ವಾಸಿಸುವ ಪ್ರದೇಶಗಳ ಸುತ್ತಮುತ್ತ ಸರಿಯಾದ ಶೌಚಾಲಯದ ವ್ಯವಸ್ಥೆಯಾಗಲಿ, ಆರೋಗ್ಯಕರ ವಾತವರಣವಾಗಲಿ ಇಲ್ಲ. ಹಗಲುವೇಷಗಾರ ಸಮುದಾಯಕ್ಕೆ ಸೇರಿದ ವ್ಯಕ್ತಿಯೊಬ್ಬರನ್ನು ಸಂದರ್ಶಿಸಿದಾಗ ಅವರು ಪ್ರತಿಕ್ರಿಯಿಸಿದ್ದು ಹೀಗೆ,

"ಏನು ಮಾಡುವುದು ಸ್ವಾಮಿ, ನಾವು ಕರ್ನಾಟಕಕ್ಕೆ ಬಂದು ಸುಮಾರು ಹತ್ತು ತಲೆಮಾರುಗಳು ಕಳೆದುಹೋದವು. ಸರಕಾರವು ನಮ್ಮ ಕಡೆ ಗಮನ ನೀಡುತ್ತಿಲ್ಲ. ನಮ್ಮ ನೆಲೆಯನ್ನು ಒಂದು ಸ್ಥಳದಲ್ಲಿ ಶಾಶ್ವತವಾಗಿ ಮಾಡಿಕೊಳ್ಳಲು ಸ್ವಂತದ್ದು ಎನ್ನುವ ಮನೆಯಿಲ್ಲ, ತುಂಡು ಭೂಮಿ ಇಲ್ಲ. ನಮ್ಮ ಜನಸಂಖ್ಯೆಯೂ ಹೆಚ್ಚಾಗಿದೆ. ಜನಪ್ರತಿನಿಧಿಗಳು ನಮ್ಮನ್ನು ಕೇವಲ ಓಟಿನ ಗೊಂಬೆಗಳನ್ನಾಗಿ ಮಾಡಿಕೊಂಡಿದ್ದಾರೆ, ಓಟು ಕೇಳುವ ಸಂದರ್ಭದಲ್ಲಿ ನಿಮಗೆ ಮನೆಗಳನ್ನು ಕಟ್ಟಿಸಿಕೊಡುತ್ತೇವೆ, ನಮಗೆ ಓಟು ಹಾಕಿ ಎಂದು ಓಟು ಹಾಕಿಸಿಕೊಂಡು ಗೆದ್ದ ನಂತರ ನಮ್ಮ ಕಡೆ ತಿರುಗಿ ನೋಡುವುದಿಲ್ಲ. ಹೀಗಾದರೆ ನಾವು ಹೇಗೆ ಬದುಕುವುದು, ನೆಲೆ ಇಲ್ಲವೆಂದ ಮೇಲೆ ಕಾಲ ಕಳೆಯುವುದು ಹೇಗೆ ಗುಡಾರಗಳೇ ನಮ್ಮ ಪಾಲಿಗೆ ವಾಸದ ಅರಮನೆಗಳು".[೮]

ಇತ್ತೀಚೆಗೆ ಸರಕಾರವು ಇವರನ್ನು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಿ, ಮೀಸಲಾತಿ ಆಧಾರದ ಮೇಲೆ ಸರಕಾರದಿಂದ ದೊರೆಯುವ ಆಶ್ರಯ ಯೋಜನೆಯ ಅಡಿಯಲ್ಲಿ ಒಂದು ನಿರ್ದಿಷ್ಟವಾದ ಸ್ಥಳವನ್ನು ಗುರುತಿಸಿ ಹೊಸ ಮನೆಗಳನ್ನು ನಿರ್ಮಿಸಿಕೊಡುವ ಪ್ರಯತ್ನ ಮಾಡುತ್ತಿರುವುದನ್ನು ಕಾಣುತ್ತೇವೆ. ಗಬ್ಬೂರಿನಲ್ಲಿ ವಾಸ ಮಾಡುವ ಹಗಲುವೇಷಧಾರಿ ಕುಟುಂಬಗಳಿಗೆ ಸರಕಾರವು ೨೦೦೨ನೇ ಸಾಲಿನಲ್ಲಿ ಸುಮಾರು ಹತ್ತು ಆಶ್ರಯ ಮನೆಗಳನ್ನು ನಿರ್ಮಿಸಿಕೊಟ್ಟಿದೆ. ಇದರಿಂದ ಈ ಜನ ಸಮುದಾಯವು ಖಾಯಂ ವಸತಿ ನೆಲೆಯನ್ನು ಕಂಡುಕೊಂಡಂತಾಗಿದೆ. ಇನ್ನು ಹಲವು ಹಳ್ಳಿಗಳಲ್ಲಿ ವಾಸ ಮಾಡುವ ಜನರಿಗೆ ಸರಕಾರವು ವಸತಿ ವ್ಯವಸ್ಥೆಯನ್ನು ನಿರ್ಮಿಸಿಕೊಡುವ ಪ್ರಯತ್ನವನ್ನು ಮಾಡುತ್ತಿದೆ. ಈ ಜನಾಂಗವು ತಮ್ಮ ಅಲೆಮಾರಿ ಜೀವನವನ್ನು ಬಿಟ್ಟು ಒಂದು ನಿರ್ದಿಷ್ಟವಾದ ಊರಿನಲ್ಲಿ ಖಾಯಂ ನೆಲೆಯನ್ನು ಕಂಡುಕೊಂಡರೆ ಸರಕಾರಕ್ಕೆ ಇವರಿಗೆ ಎಲ್ಲ ರೀತಿಯ ವ್ಯವಸ್ಥೆಯನ್ನು ಒದಗಿಸಿಕೊಡುವುದು ಸುಲಭವಾಗುತ್ತದೆ. ಈ ಜನಾಂಗವು ಊರಿಂದ ಊರಿಗೆ ಸಂಚರಿಸುವುದರಿಂದ ಸರಕಾರದ ಸೌಲಭ್ಯಗಳನ್ನು ತಾವೆ ಕಳೆದುಕೊಂಡಂತೆ ಆಗುತ್ತದೆ. ಇದರಿಂದ ಸರಕಾರಕ್ಕೆ ಈ ಜನಾಂಗದ ಬದುಕಿನ ಸ್ಥಿತಿಯನ್ನು ಗುರುತಿಸುವುದು ಕಷ್ಟವಾಗುತ್ತದೆ. ಆದರೆ ಒಂದೇ ಕಡೆ ನೆಲೆ ನಿಲ್ಲುವುದು, ಭೂಮಿಯನ್ನು ಪಡೆಯುವುದು, ಸವಲತ್ತುಗಳನ್ನು ಹೊಂದುವುದು ಮುಂತಾದವು ಅಷ್ಟು ಸುಲಭದ ಕೆಲಸಗಳಲ್ಲ. ಸ್ಥಾಪಿತ ಹಿತಾಸಕ್ತಿಗಳ

ವಿರುದ್ಧ ಸೆಟೆದು ನಿಲ್ಲುವ ಇಲ್ಲವೇ ಹೊಂದಾಣಿಕೆ ಮಾಡಿಕೊಳ್ಳುವ ಚಾಕಚಕ್ಯತೆಯನ್ನು ಈ ಸಮುದಾಯ ಬೆಳೆಸಿಕೊಂಡಂತೆ ಕಂಡುಬರುವುದಿಲ್ಲ.

೯. ವೃತ್ತಿಗಳು

ಹಗಲುವೇಷಗಾರರ ಕಸುಬುಗಳೆಂದರೆ ವೇಷಗಾರಿಕೆ, ಭಿಕ್ಷೆ ಬೇಡುವುದು, ಬೇಟೆಯಾಡುವುದು, ಪಶುಪಾಲನೆ, ಚಾಪೆ ಹೆಣೆಯುವುದು, ಕೌದಿ ಹೊಲಿಯುವುದು, ವೇಷಗಳಿಗೆ ಬೇಕಾದ ಪರಿಕರಗಳನ್ನು ತಯಾರಿಸುವುದು ಮುಂತಾದವು.

ಗಂಡಸರು ಹಗಲಿನಲ್ಲಿ ವೇಷ ಧರಿಸಿಕೊಂಡು ಊರಿನ ಒಳಗೆ ಹೋಗುತ್ತಾರೆ. ಗಂಡಸರೆ ಹೆಣ್ಣಿನ ವೇಷವನ್ನು ಹಾಕುತ್ತಾರೆ. ವೇಷಕ್ಕೆ ಬೇಕಾದ ಗಧೆ, ಬೆತ್ತ, ಮೈಗೆ ಬಣ್ಣ, ಉಡುಪುಗಳನ್ನು ಇನ್ನಿತರ ಆಭರಣಗಳನ್ನು ವೇಷಕ್ಕೆ ತಕ್ಕಂತೆ ಧರಿಸಿಕೊಂಡು, ಹಾರ್ಮೋನಿಯಂ, ತಬಲ ಹಾಗೂ ಗೆಜ್ಜೆಸರ ಮುಂತಾದವುಗಳನ್ನು ಇವರು ಬಳಸಿಕೊಂಡು, ಹಾಡು ಮತ್ತು ಮಾತುಗಳಿಂದ ಕೂಡಿದ, ಇಂಪಾದ ಸಂಗೀತಗಳಿಂದ ಕೂಡಿದ ಕಥಾ ಸಂದರ್ಭಗಳನ್ನು ಪ್ರರ್ದಶಿಸುತ್ತಾರೆ. ಇವರು ಐತಿಹಾಸಿಕ, ಪೌರಾಣಿಕ, ಸಾಮಾಜಿಕ ಕಥೆಗಳ ವೇಷಗಳನ್ನು ಹಾಕಿಕೊಂಡು, ಪ್ರತಿ ಮನೆಯ ಮುಂದೆ ಐದು ಹತ್ತು ನಿಮಿಷ ಪ್ರದರ್ಶನ ಮಾಡುತ್ತಾ ಇಂತಿಷ್ಟು ದಿನಗಳು ಎಂದು ಅವಧಿಯನ್ನು ನಿಗದಿ ಮಾಡಿಕೊಂಡು ಕಲೆ ಪ್ರದರ್ಶನ ಮಾಡಿದ ನಂತರ ದವಸಧಾನ್ಯ, ಹಣ, ಬಟ್ಟೆಗಳನ್ನು ಕುರಿ, ಮೇಕೆ, ಮುಂತಾದವುಗಳನ್ನು ದಾನ ರೂಪದಲ್ಲಿ ಭಿಕ್ಷೆ ಎತ್ತುತ್ತಾರೆ. ಇದು ಶ್ರಮಧ ಫಲ ಎಂದು ಹೇಳಬಹುದು.

ಹೆಣ್ಣು ಮಕ್ಕಳು ತಂಬೂರಿ, ಡುಮುಕಿ, ವೀಣಾ, ಗಗ್ಗರ ಮುಂತಾದವುಗಳನ್ನು ಹಿಡಿದುಕೊಂಡು ಕೊಂಕಳಲ್ಲಿ ಒಂದು ಜೋಳಿಗೆಯನ್ನು ಹಾಕಿಕೊಂಡು ಮುಂಜಾನೆ ಊರಿನೊಳಗೆ ಹೋಗಿ ಮನೆ ಮನೆಯ ಮುಂದೆ ಹಾಡುತ್ತಾ, ಕಥೆಗಳನ್ನು ಹೇಳುತ್ತಾ, ಆಹಾರ, ದವಸಧಾನ್ಯಗಳನ್ನು, ಬಟ್ಟೆಗಳನ್ನು ಪಡೆದುಕೊಂಡು ಬರುತ್ತಾರೆ. ಇದರಿಂದ ತಮ್ಮ ಪ್ರಧಾನ ಅವಶ್ಯಕತೆಗಳಾದ ಆಹಾರ ಮತ್ತು ಬಟ್ಟೆಗಳನ್ನು ಪಡೆಯುತ್ತಾರೆ.

ಬೇಟೆಯಾಡುವುದು ಹಗಲುವೇಷಗಾರರಲ್ಲಿ ಒಂದು ಕಸುಬಾಗಿ ಬೆಳೆದುಕೊಂಡು ಬಂದಿದೆ. ರಾಜ ಮಹಾರಾಜರ ಕಾಲದಲ್ಲಿ ಬೇಟೆಯಾಡುವುದು ಒಂದು ಮನರಂಜನೆ ಕ್ರೀಡೆಯಾಗಿದ್ದರೆ ಸಾಮಾನ್ಯ ಜನರಿಗೆ ಇನ್ನೊಂದು ಕಾರಣವಾಗಿರುತ್ತದೆ. ಅಂತೆಯೇ ಹಗಲುವೇಷಗಾರರು ತಮ್ಮ ಆಹಾರಕ್ಕಾಗಿ ಬೇಟೆಯಾಡುವುದನ್ನು ವಂಶಪಾರಂಪರ್ಯವಾಗಿ ಬೆಳೆಸಿಕೊಂಡು ಬಂದಿರುವದು ಒಂದು ಪ್ರಮುಖ ಸಂಗತಿ ಎಂದು ಹೇಳಬಹುದು. ಸಾಮಾನ್ಯವಾಗಿ ವೇಷಗಾರರು ಹಲವು ವಿಧದ ಬೇಟೆಗಳನ್ನು ಹಾಡಿ ತಮ್ಮ ಆಹಾರದ ಕೊರತೆಯನ್ನು ತುಂಬಿಸಿಕೊಳ್ಳುತ್ತಾರೆ. ಉಡ, ಮುಂಗಸಿ, ಅಳಿಲು ಬೇಟೆ, ನರಿ, ತೋಳ, ಮೊಲ, ಚಿಗರೆ, ಕೌಜುಗ,

ಆಮೆ, ಮೀನು ಮುಂತಾದವುಗಳನ್ನು ಬೇಟೆಯಾಡಿ ತಿಂದರೆ ಮಾತ್ರ ಇವರಿಗೆ ತೃಪ್ತಿ. ಇವರು ಬೇಟೆಯಾಡುವುದನ್ನು 'ಶಿಕಾರಿ' ಎನ್ನುತ್ತಾರೆ.

ಪಶುಪಾಲನೆ ಹಗಲುವೇಷಗಾರರ ಮತ್ತೊಂದು ವೃತ್ತಿಯಾಗಿದೆ. ಊರಿನಲ್ಲಿ ದಾನ ರೂಪದಲ್ಲಿ ಬಂದ ಹಸುಗಳು, ಮೇಕೆ, ಕುರಿ ಮುಂತಾದವುಗಳನ್ನು ಜೋಪಾನವಾಗಿ ಸಾಕುತ್ತಾರೆ. ಪಶುಪಾಲನೆಯಿಂದ ಅವರಿಗೆ ಬೇಕಾದ ಹಾಲು, ಮೊಸರು, ತುಪ್ಪ ಜೊತೆಗೆ ತಮ್ಮ ಆರ್ಥಿಕ ಸ್ಥಿತಿಯನ್ನು ತುಂಬಿಕೊಳ್ಳಲು ಇದೊಂದು ಪ್ರಮುಖ ವೃತ್ತಿಯಾಗಿದೆ. ತಮ್ಮ ಸಾಮಾನುಗಳನ್ನು ಊರಿಂದ ಊರಿಗೆ ಸಾಗಿಸಲು ಪಶುಗಳ ಸಾಕಾಣಿಕೆ ಅವರಿಗೆ ಅನಿವಾರ್ಯವೂ ಆಗಿದೆ.

### ೧೦. ವೇಷಭೂಷಣ : ಪರಿಕರಗಳ ತಯಾರಿಕೆ

ಹಗಲುವೇಷಗಾರರು ತಮ್ಮ ವೇಷಗಳಿಗೆ ಬೇಕಾದ ವೇಷಭೂಷಣ ಪರಿಕರಗಳನ್ನು ತಾವೆ ತಯಾರಿಸಿಕೊಳ್ಳುತ್ತಾರೆ. ವಿವಿಧ ರೀತಿಯ ಬಣ್ಣ, ಉಡುಪು, ಆಯುಧ ಮುಂತಾದ ಎಲ್ಲವುಗಳನ್ನು ತಾವೇ ತಯಾರು ಮಾಡಿಕೊಳ್ಳುತ್ತಾರೆ. ಹಿಂದಿನ ಕಾಲದಲ್ಲಿ ಈಗಿನಂತೆ ಬಣ್ಣಗಳು ಅಂಗಡಿಗಳಲ್ಲಿ ಸಿಗದಿದ್ದ ಕಾಲದಲ್ಲಿ ಇವರ ಪೂರ್ವಿಕರು ಕೃಷ್ಣಾ, ಗೋದಾವರಿ ಮುಂತಾದ ನದಿಗಳಲ್ಲಿ ಸಿಕ್ಕುವ ಬಣ್ಣ ಬಣ್ಣದ ಕಲ್ಲುಗಳನ್ನು ಆರಿಸಿ ತೆಗೆದು ಅವುಗಳನ್ನು ಒಂದು ಮೂಟೆಯಲ್ಲಿ ಕಟ್ಟಿಕೊಂಡು ತರುತ್ತಿದ್ದರು. ತಮಗೆ ಯಾವ ಬಣ್ಣ ಬೇಕೋ ಆ ಬಣ್ಣದ ಕಲ್ಲನ್ನು ನೀರಿನೊಂದಿಗೆ ತೇದು, ಆ ಬಣ್ಣವನ್ನು ಮುಖಕ್ಕೆ ಬಳಿದುಕೊಳ್ಳುತ್ತಿದ್ದರು ಎಂಬುದು ನಮಗೆ ತಿಳಿದು ಬರುತ್ತದೆ. ಕಪ್ಪು ಬಣ್ಣಕ್ಕೆ ಇದ್ದಿಲನ್ನು ಬಳಸುವುದು ರೂಢಿಯಲ್ಲಿತ್ತೆಂದು, ಕುದುರೆ ಬಾಲದ ಕೂದಲಿನಿಂದ ಗಡ್ಡ, ಕುರಿಯ ತುಪ್ಪಟದಿಂದ ಮೀಸೆ ಮಾಡಿ ದಾರದಿಂದ ಕಟ್ಟಿಕೊಳ್ಳುತ್ತಿದ್ದರೆಂದು ಹೇಳುತ್ತಾರೆ. ತೆಳುವಾದ ತಗಡನ್ನು ಸುಂದರವಾಗಿ ಕತ್ತರಿಸಿ, ಅದಕ್ಕೆ ಬಂಗಾರ ಬಣ್ಣದ ಪುಡಿಯನ್ನು ಸಿಲ್ವರ್ ಪೇಯಿಂಟ್‌ನೊಂದಿಗೆ ಮಿಶ್ರಮಾಡಿ ಬಳಿದು ಮೇಲುತುದಿಗೆ ಬಣ್ಣದಲ್ಲಿ ಅದ್ದಿ ಒಣಗಿದ ಕೋಳಿ ಪುಕ್ಕವನ್ನು ಸಿಲುಕಿಸಿ ಆ ತಗಡನ್ನು ತಲೆಗೆ ಹೊಂದಿಕೊಳ್ಳುವಂತೆ ಸುತ್ತಿ ಕಟ್ಟಿಕೊಳ್ಳುತ್ತಾರೆ. ಇದನ್ನು 'ಮುಕುಟ' ಅಥವಾ 'ಕಿರೀಟ' ಎನ್ನುತ್ತಾರೆ.[೧೦] ಅಲ್ಲದೆ ವಿವಿಧ ಪ್ಲಾಸ್ಟಿಕ್ ಮಣಿಗಳಿಗೆ ಬಣ್ಣಗಳನ್ನು ಬಳಿದು ಅವುಗಳನ್ನು ಕುತ್ತಿಗೆಗೆ ಆಭರಣಗಳನ್ನಾಗಿ ಮಾಡಿಕೊಳ್ಳುತ್ತಾರೆ. ಇದಕ್ಕೆ 'ಮೆಡಕಂಠಿ' ಅಥವಾ 'ನೆಕಲೆಸ್' ಎನ್ನುತ್ತಾರೆ. ಇದೇ ರೀತಿಯ ತೋಳಬಂದಿ, ಮಣಿಕಟ್ಟು ಹಾಗೂ ಸೊಂಟಪಟ್ಟಿಗಳನ್ನು ಮಾಡಿಕೊಳ್ಳುತ್ತಾರೆ. ಪಾತ್ರಗಳಿಗೆ ತಕ್ಕಂತೆ ಬಣ್ಣ ಬಣ್ಣದ ಸೀರೆಗಳನ್ನು ಬಳಸುತ್ತಾರೆ. ಇವು ಹೆಚ್ಚಾಗಿ ಊರಿನಲ್ಲಿ ದಾನವಾಗಿ ಪಡೆದ ಸೀರೆಗಳಾಗಿರುತ್ತವೆ. ಇವುಗಳಿಗೆ ಬಣ್ಣ ಬಣ್ಣದ ಪಟ್ಟಿಗಳನ್ನು ತಾವೆ ಹೊಲಿದುಕೊಂಡು ಪಾತ್ರಗಳಿಗೆ ಸರಿಹೊಂದುವಂತೆ ಬಳಸುತ್ತಾರೆ.

## ೧೧. ನ್ಯಾಯಾಂಗ ವ್ಯವಸ್ಥೆ

ಹಗಲುವೇಷಗಾರ ಜನಸಮುದಾಯವು ಅತ್ಯಂತ ಕಟ್ಟುನಿಟ್ಟಾದ ನ್ಯಾಯಾಂಗ ವ್ಯವಸ್ಥೆಯನ್ನು ಹೊಂದಿದೆ. ಈ ಜನಸಮೂಹದಲ್ಲಿ ಕಳ್ಳತನ, ಕೊಲೆ, ಒಂದು ಹೆಣ್ಣು ಅನೈತಿಕ ಸಂಬಂಧ ಹೊಂದಿದ್ದರೆ, ಅಥವಾ ತಪ್ಪು ಮಾಡಿದ್ದರೆ ತಪ್ಪಿಗೆ ತಕ್ಕಂತೆ ದಂಡ ಮತ್ತು ನಿರ್ಬಂಧಗಳನ್ನು ವಿಧಿಸಲಾಗುತ್ತದೆ. ಹಗಲು ವೇಷಗಾರ ಜನಾಂಗದಲ್ಲಿ ಪಂಚಾಯತ್ ತೀರ್ಪನ್ನು ಕಟ್ಟಿಮನಿಯವರು ನಡೆಸಿಕೊಡುತ್ತಾರೆ. ಇವರಿಗೆ "ಮಾಂತು" ಅಥವಾ "ಯಡವಲಿ" ಎನ್ನುತ್ತಾರೆ. ಕಟ್ಟಿಮನಿಯವ ಕೈಕೆಳಗೆ "ಸಂಕಲೊಳು" ಬೆಡಗಿನವರು ತಳುವಾರರೆಂದು ಕಾರ್ಯನಿರ್ವಹಿಸುತ್ತಾರೆ. ಈ ಜನಾಂಗದಲ್ಲಿ ಯಾವುದೇ ತಪ್ಪುಗಳು ಸಂಭವಿಸಿದರೆ ತಮ್ಮದೇ ಆದ ಕುಲದ ಕಟ್ಟೆ, ಅಥವಾ ನ್ಯಾಯದ ಕಟ್ಟೆಯನ್ನು ಏರ್ಪಡಿಸಿಕೊಳ್ಳುತ್ತಾರೆ. ಯಾವುದೇ ಕಾರಣಕ್ಕೂ ಈ ಜನಾಂಗದ ಪ್ರಕರಣಗಳು ಪೋಲಿಸ್‌ಸ್ಟೇಷನ್ ಅಥವಾ ಕೋರ್ಟುಗಳ ಮೆಟ್ಟಿಲನ್ನು ಹತ್ತುವುದು ತೀರಾ ಕಡಿಮೆ. ಏನೇ ಪ್ರಕರಣಗಳು ಸಂಭವಿಸಿದರೂ ಅವರಲ್ಲೇ ಸರಿಪಡಿಸಿಕೊಳ್ಳುತ್ತಾರೆ.

ಸಾಮಾನ್ಯವಾಗಿ ಯಾವುದೇ ತಪ್ಪುಗಳು ಈ ಜನಾಂಗದಲ್ಲಿ ಸಂಭವಿಸಿದಾಗ ಮೊದಲಿಗೆ ಕಟ್ಟಿಮನಿಯವರಿಗೆ ತಲುಪುತ್ತದೆ. ಆಗ ಕಟ್ಟಿಮನಿಯವರು ಇಂತ ದಿನ ನ್ಯಾಯದ ಕಟ್ಟೆಯನ್ನು ನಡೆಸೋಣ ಎನ್ನುತ್ತಾನೆ. ಆಗ ನಿಗದಿಪಡಿಸಿದ ದಿನದಂದು ಸಿರಿಸ್ಯಾಲಮಾಂತು ಎಲ್ಲಾ ಕುಲಸ್ಥರನ್ನು ಒಂದುಗೂಡಿಸಿ ತಾನು ನ್ಯಾಯದ ಕಟ್ಟೆಯ ಪೀಠವನ್ನು ಅಲಂಕರಿಸುತ್ತಾನೆ. ನಂತರ ತಪ್ಪು ಮಾಡಿದವರು ತಮ್ಮ ತಮ್ಮ ತಪ್ಪನ್ನು ವಿಸ್ತರಿಸಿ ಹೇಳುತ್ತಾರೆ. ನಂತರ ಇವರ ನ್ಯಾಯದ ವ್ಯವಸ್ಥೆಯಲ್ಲಿ ನ್ಯಾಯ ತೀರ್ಮಾನಿಸುವಾಗ ಮೊದಲಿಗೆ ಕಡ್ಡಿಹಾಕುವ ಪದ್ಧತಿಯನ್ನು ಅನುಸರಿಸುತ್ತಾರೆ. ಇಬ್ಬರು ತಪ್ಪುಮಾಡಿದ ವ್ಯಕ್ತಿಗಳು ತಲಾ ಒಂದೊಂದು ಉಂಗುರವನ್ನು ಹಾಕಿ ೧೧ ರೂ.ಯಂತೆ ಹಣ ಮುಂದಿಡುತ್ತಾರೆ. ಇದನ್ನು ಮಾಂತುಗಾರನು ತಪ್ಪು ಮಾಡಿದವರಿಂದ ಮಾಡಿಸುತ್ತಾನೆ. ನಂತರ ಅವರ ಸಮಸ್ಯೆಗಳನ್ನು ಪರಿಶೀಲಿನೆ ಮಾಡಿ ಅವರಿಬ್ಬರಿಗೆ ತಪ್ಪಿನ ತಿಳುವಳಿಕೆಯನ್ನು ಮನಮುಟ್ಟುವಂತೆ ಹೇಳಿ ಇಬ್ಬರಿಗೆ ತಪ್ಪಿಗೆ ತಕ್ಕಂತೆ ದಂಡವನ್ನು ವಿಧಿಸುತ್ತಾನೆ. ಸಾಮಾನ್ಯವಾಗಿ ದೊಡ್ಡ ತಪ್ಪು ಮಾಡಿದವನಿಗೆ ಹೆಚ್ಚಿನ ದಂಡವನ್ನು, ಸಣ್ಣ ತಪ್ಪು ಮಾಡಿದವನಿಗೆ ಕಡಿಮೆ ದಂಡವನ್ನು ವಿಧಿಸುತ್ತಾನೆ. ಈ ಜನಾಂಗದಲ್ಲಿ ಒಂದು ಹೆಣ್ಣು ಇನ್ನೊಬ್ಬ ಗಂಡಿನ ಜೊತೆಗೆ ಅನೈತಿಕ ಸಂಬಂಧವನ್ನು ಹೊಂದಿದ್ದರೆ, ಅಂತಹ ಮಹಿಳೆಗೆ ನಿರ್ಬಂಧಗಳನ್ನು ಹಾಕಿ ನ್ಯಾಯವನ್ನು ತೀರ್ಮಾನಿಸುತ್ತಾರೆ. ಹೆಣ್ಣು ತನ್ನ ಕುಲದವನ ಜೊತೆಗೆ ಅಥವಾ ಸಮಾಜದ ಇನ್ನೊಂದು ವರ್ಗದ ಮೇಲು ಜಾತಿಯವನೊಡನೆ ಸಂಬಂಧ ಹೊಂದಿದ್ದರೆ ಅವಳನ್ನು ನ್ಯಾಯದ ಕಟ್ಟೆಗೆ ಒಳಪಡಿಸಿ ಸಮಸ್ಯೆಯನ್ನು ಪರಿಶೀಲಿಸಿ ಅವಳಿಗೆ ತಿಳಿ ಹೇಳಿ ತಪ್ಪಿಗೆ ತಕ್ಕ ದಂಡವನ್ನು ವಿಧಿಸಿ ಅವಳನ್ನು ಕುಲದಲ್ಲಿ ಸೇರಿಸಿಕೊಳ್ಳುತ್ತಾರೆ. ಇನ್ನೊಮ್ಮೆ ಈ ರೀತಿ ಘಟನೆ ಸಂಭವಿಸಿದಂತೆ ಎಚ್ಚರ ವಹಿಸಬೇಕು ಎಂದು ಹೇಳುತ್ತಾರೆ. ಆದರೆ ಈ ಜನಾಂಗದ ಹೆಣ್ಣು ತನ್ನ ಜಾತಿಗಿಂತ ಕೆಳಮಟ್ಟದ ಪುರುಷನೊಂದಿಗೆ ಉದಾ: ಮೊಂಡರು, ಮೋಡಿಕಾರರು

ಮೊದಲಾದವರೊಂದಿಗೆ ಸಂಬಂಧ ಹೊಂದಿದ್ದರೆ, ಅಂತಹ ಮಹಿಳೆಯನ್ನು ಇಡೀ ಸಮಾಜದಿಂದ ಬಹಿಷ್ಕಾರ ಹಾಕುತ್ತಾರೆ. ಜನಾಂಗದಲ್ಲಿ ಯಾರು ಅವಳನ್ನು ಮಾತಾಡಿಸುವಂತಿಲ್ಲ, ಅನ್ನ ನೀರು ಕೊಡುವಂತಿಲ್ಲ, ಒಟ್ಟಿನಲ್ಲಿ ಅವಳನ್ನು ಜನಾಂಗದಲ್ಲಿ ಸೇರಿಸಿಕೊಳ್ಳುವಂತಿಲ್ಲ. ಒಂದು ವೇಳೆ ಈ ಜನಾಂಗದಲ್ಲಿ ಒಬ್ಬ ಪುರುಷ ಇನ್ನೊಬ್ಬನನ್ನು ಕೊಲೆ ಮಾಡಿದ್ದರೆ ಅಥವಾ ಅವನು ಕೊಲೆ ಮಾಡಿ ತಪ್ಪಿಸಿಕೊಂಡು ಹೋಗಿದ್ದರೆ ಕಟ್ಟಿಮನಿಯ ಮಾಂತು ಸಂಕಲೊಳ್ ಬೆಡಗಿನ ತಳುವಾರನನ್ನು ಕರೆದು ಕೊಲೆ ಮಾಡಿದ ಅಪರಾಧಿಯೂ ಎಲ್ಲೆ ಇದ್ದರೂ ಹುಡುಕಿಕೊಂಡು ಬರುವಂತೆ ಹೇಳುತ್ತಾನೆ. ಆಗ ತಳುವಾರನು ಗೂಡಾಚಾರಿಯಾಗಿ ಅಪರಾಧಿಯನ್ನು ಪತ್ತೆ ಹಚ್ಚುತ್ತಾನೆ. ನಂತರ ಅವನನ್ನು ಹಿಡಿದುಕೊಂಡು ಬಂದು ಕತ್ತಲೆ ಮನೆಯಲ್ಲಿ ಕೈಕಾಲು ಕಟ್ಟಿ ಹಾಕುತ್ತಾರೆ. ಅನಂತರ ನ್ಯಾಯದ ಕಟ್ಟೆಯನ್ನು ಏರ್ಪಡಿಸಿ ಅವನನ್ನು ನ್ಯಾಯದ ಕಟ್ಟೆಗೆ ಕರೆದು ತರುತ್ತಾರೆ. ನಂತರ ಕಡ್ಡಿಹಾಕಿ ಸಮಸ್ಯೆ ಪರಿಶೀಲನೆ ನಡೆಸುತ್ತಾರೆ. ನ್ಯಾಯ ತೀರ್ಮಾನ ಆದನಂತರ ದೊಡ್ಡ ತಪ್ಪು ಮಾಡಿದವನಿಗೆ ಎರಡು ಪಟ್ಟು ದಂಡ ವಿಧಿಸುತ್ತಾರೆ. ಕಡಿಮೆ ತಪ್ಪು ಮಾಡಿದವನಿಗೆ ಒಂದು ಪಟ್ಟು ದಂಡ ವಿಧಿಸುತ್ತಾರೆ. ನ್ಯಾಯ ತೀರ್ಮಾನವಾದ ನಂತರ ಬಂದಂತಹ ದಂಡದಲ್ಲಿ ನೆರೆದಂತ ಎಲ್ಲಾ ಕುಲಸ್ಥರು ಸೇರಿ ಹೆಂಡ, ಸಾರಾಯಿ ಕುಡಿದು ಖರ್ಚು ಮಾಡುತ್ತಾರೆ.[೧೧] ಈ ರೀತಿಯ ನ್ಯಾಯ ವ್ಯವಸ್ಥೆ ಹಗಲುವೇಷಗಾರರಲ್ಲಿ ಬೆಳೆದುಕೊಂಡು ಬಂದಿದೆ.

## ೧೨. ಮೀಸಲಾತಿ

ಮೀಸಲಾತಿ ಅನ್ನುವುದು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಮತ್ತು ರಾಜಕೀಯವಾಗಿ ಅಧಃಪತನ ಹೊಂದಿದವರೆಲ್ಲರೂ ಅನುಭವಿಸಲು ಆಧುನಿಕ ಸರಕಾರ ರೂಪಿಸಿದ ಸಂವಿಧಾನಾತ್ಮಕ ಹಕ್ಕಾಗಿದೆ.[೧೨] ಆದರೆ ಈ ಮೀಸಲಾತಿಯ ಉಪಯೋಗವನ್ನು ಕೆಲವೆ ವರ್ಗಗಳು ಅನುಭವಿಸುತ್ತಿವೆ. ಕೆಲವು ಸಮುದಾಯಗಳು ಮೀಸಲಾತಿಯ ಜ್ಞಾನವೆ ಪಡೆದಿಲ್ಲ, ಕೆಲವು ಸಮುದಾಯಗಳಿಗೆ ಮೀಸಲಾತಿ ಎಂದರೇನು ಗೊತ್ತಿಲ್ಲ. ಅಂತ ಮೀಸಲಾತಿ ವಂಚಿತ ಸಮುದಾಯಗಳಲ್ಲಿ ಹಗಲುವೇಷಗಾರರೂ ಒಬ್ಬರಾಗಿದ್ದರೆ.

### ಕೇಂದ್ರಸರಕಾರ ಮತ್ತು ರಾಜ್ಯಸರಕಾರ

ವೇಷಗಾರರನ್ನು ಕುರಿತು ಕೇಂದ್ರಿಯ ಪ್ರಾಂತ್ಯದ ಜನಗತಿ ಆಯುಕ್ತರ ಅಭಿಪ್ರಾಯ ಹೀಗಿದೆ. "The Bahuripes from an example of the mode in which the followers of a particular occupation tend to become a distinct caste. The men are by profession story tellers, mimics an imitating. The voice of men and the notes of animals their male children are also trained to dance in payment for their entertainment they are usually content with cost of clothes. The mahar, mang and maratha divisions

of Bahuripes are the most frequent in Berror, the fromer two begging only from the caste which they take their name.[13] ಅನುವಾದ: ಬಹುರೂಪಿಗಳು ನಿರ್ದಿಷ್ಟವಾದ ವೃತ್ತಿಯೊಂದಿಗೆ ಗುರುತಿಸಿಕೊಳ್ಳುವವರನ್ನು ಇಂತಹದೆ ಜಾತಿಯವರೆಂದು ಉಲ್ಲೇಖಿಸಬಹುದು. ಗಂಡಸರು ವೃತ್ತಿಪರ ಕತೆಗಾರರು, ಏಕಾಭಿನಯ, ಅಣುಕುದಾರರಾದ ಇವರು ಮನುಷ್ಯನ ಮತ್ತು ಪ್ರಾಣಿಗಳ ನಡುವಳಿಕೆಗಳನ್ನು ಅನುಕರಿಸುವರು ಗಂಡು ಮಕ್ಕಳಿಗೂ ನೃತ್ಯ ತರಬೇತಿ ನೀಡುತ್ತಾರೆ. ಇವರು ನೀಡುವ ಪ್ರದರ್ಶನಗಳಿಗೆ ಸಂಭಾವನೆಯನ್ನು ದೂರದಿಂದ ಎಸೆಯುತ್ತಾರೆ. ಮಹಾರ್, ಮಾಂಗ್ ಮತ್ತು ಮರಾಠ ಪ್ರಾಂತ್ಯದ ಬಹುರೂಪಿಗಳಾದವರು ಬೆರಾರ್‌ನಲ್ಲಿ ಆಗಾಗ ಕಾಣಿಸಿಕೊಳ್ಳುವರು. ಭಿಕ್ಷುಕರಾದವರು ಪೂರ್ವದಿಂದಲೂ ತಮ್ಮನ್ನು ಸಂಬಾಳಿಸುವ ಜಾತಿಯ ಜನರುಗಳ ಬಳಿ ಬೇಡುತ್ತಾರೆ. ಅನಾದಿ ಕಾಲದಿಂದಲೂ ಆಸ್ತಿಪಾಸ್ತಿಗಳಿಲ್ಲದೆ ನಿರ್ಗತಿಕರಾದ ಇವರು ಜೀವನೋಪಾಯಕ್ಕೆ ಇಂತಹ ವೃತ್ತಿಯನ್ನು ಕೈಗೊಂಡಿದ್ದಾರೆ. ಅಂದಿನ ಜೀವನ ವಿಧಾನವನ್ನು ಸಂಕ್ಷಿಪ್ತವಾಗಿ ತಿಳಿಸುತ್ತದೆ.

೧೯೫೧ರ ನಿಜಾಂ ಜನಗಣತಿಯ ಪ್ರಕಾರ ಬೇಡ (ಬುಡ್ಗ) ಜಂಗಾಲು ಜನಾಂಗವನ್ನು ಪರಿಶಿಷ್ಟ ಜಾತಿಗಳ ಪಟ್ಟಿಯಲ್ಲಿ ಈ ಜನಾಂಗವನ್ನು ನಾಲ್ಕನೆ ಕ್ರಮಸಂಖ್ಯೆಯಲ್ಲಿ ಗುರುತಿಸಲಾಗಿದೆ. ಭಾರತದ ಆಡಳಿತದ ಜನಗಣತಿಯ ಪ್ರಕಾರ ೧೯೫೬ರಲ್ಲಿ ಬೇಡ (ಬುಡ್ಗ) ಜಂಗಮ ಎಂದು ಕ್ರಮಸಂಖ್ಯೆ ೪ರಲ್ಲಿಯೇ ಗುರುತಿಸಿ ಅದು ತೆಲುಂಗಾಣ ಜಿಲ್ಲೆಯಲ್ಲಿಯೇ ಮಾತ್ರ ಇದ್ದಾರೆಂದು ನಮೂದಿಸಲಾಯಿತು.[೧೪]

೧೯೭೬ರಲ್ಲಿ ಹೊರಡಿಸಿದ ರಾಜ್ಯಪತ್ರದಲ್ಲಿ ಈ ಕುಲವನ್ನು ಕ್ರಮಸಂಖ್ಯೆ ೯ರಲ್ಲಿಯೇ ಇರಿಸಿ ತೆಲುಂಗಾಣ ಜಿಲ್ಲೆಗೆ ಸೀಮಿತವಾದ ಈ ಕುಲವನ್ನು ಇಡೀ ರಾಷ್ಟ್ರವ್ಯಾಪ್ತಿಯಾಗಿ ವಿಸ್ತರಿಸಲಾಯಿತು.[೧೫]

೧೯೭೫ರಲ್ಲಿ ಎಲ್.ಜಿ. ಹಾವನೂರು ಆಯೋಗದ ವರದಿಯ ನಾಲ್ಕನೆಯ ಅಧ್ಯಾಯದಲ್ಲಿ ಈ ಹಗಲು ವೇಷಗಾರರನ್ನು ಬೇಡ (ಬುಡ್ಗ) ಜಂಗಮ ಎಂದು ಗುರುತಿಸಿ ತೀರ ಹಿಂದುಳಿದ ಜಾತಿಗೆ ಸೇರಿದ್ದು. ಈ ಜನಾಂಗದ ಆರ್ಥಿಕ ಸುಧಾರಣೆ ಮತ್ತು ಮೀಸಲಾತಿಯ ಅವಶ್ಯಕತೆಗಳ ಬಗ್ಗೆ ಒತ್ತಿ ಹೇಳಲಾಗಿದೆ. ಈ ಬುಡುಗ ಜಂಗಾಲು, ಜನಾಂಗ ಅಲೆಮಾರಿಗಳಾಗಿರುವುದರಿಂದ ಇವರನ್ನು "ಅಲೆಮಾರಿ ಬುಡಕಟ್ಟು" ಎಂದು ಗುರುತಿಸಿರುವುದು ಸೂಕ್ತ ಎನಿಸುತ್ತದೆ.[೧೬]

ಕರ್ನಾಟಕ ರಾಜ್ಯಪತ್ರದ ಪರಿಶಿಷ್ಟ ಜಾತಿಯ ೧೯ನೆಯ ಕ್ರಮಸಂಖ್ಯೆಯಲ್ಲಿ ಈ ಜನಾಂಗವನ್ನು ಬೇಡ (ಬುಡ್ಗ) ಜಂಗಮ ಎಂದು ಗುರುತಿಸಲಾಗಿದೆ. ಬೇಡ ಮತ್ತು ಬುಡ್ಗ ಎರಡು ಒಂದೇ ಸಮನಾಂತರ ಶಬ್ದಗಳಾಗಿರುವುದರಿಂದ ಸರಕಾರಕ್ಕೆ ಬಿಡಿಸಲಾಗದ ಕಗ್ಗಂಟಾಗಿರುವುದರಿಂದ ಸಂವಿಧಾನಬದ್ಧ ಸೌಲಭ್ಯಗಳಿಂದ ಈ ಸಮುದಾಯಗಳು ವಂಚಿಸಲ್ಪಟ್ಟಿವೆ. ಬೇಡ ಜಂಗಮರ ಹೆಸರಿನಲ್ಲಿ ಸಂಘ ಸ್ಥಾಪಿಸಿರುವ ವೀರಶೈವ ಜಂಗಮರ ಕರಪತ್ರದ ಹೇಳಿಕೆ ಏನೆಂದರೆ "ಪೂರ್ವದಲ್ಲಿ ಬೇಡುವ ಜಂಗಮ ಬೀದರ, ಗುಲ್ಬರ್ಗಾ ಮತ್ತು ರಾಯಚೂರು ಜಿಲ್ಲೆಗಳಲ್ಲಿ ಇದ್ದರೆಂದು ಸೀಮಿತವಾಗಿತ್ತು. ಆದರೆ ಲೋಕಸಭೆ ಕಾಯಿದೆ ತಿದ್ದುಪಡಿ

೧೯೭೬ರ ಪ್ರಕಾರ ಬೇಡ ಜಂಗಮರ ವ್ಯಾಪ್ತಿ ಸಮಗ್ರ ಕರ್ನಾಟಕಕ್ಕೆ ಅನ್ವಯಿಸುತ್ತದೆ ಎಂದು ಪ್ರಕಟಣೆಗೊಳಿಸಿದೆ. ಈ ಹಿನ್ನಲೆಯಲ್ಲಿ ಬೇಡ ಜಂಗಮರಿಗೆ ರಾಯಚೂರು, ಬಳ್ಳಾರಿ, ಗುಲ್ಬರ್ಗಾ ಕರ್ನಾಟಕದ ಎಲ್ಲಾ ಶಾಲೆ-ಕಾಲೇಜ್, ಕಛೇರಿಗಳಲ್ಲಿ ಪರಿಶಿಷ್ಟರೆಂದು ಗುರುತಿಸಿ ರಿಯಾಯಿತಿ ನೀಡಲಾಗಿದೆ. ಹಗಲುವೇಷಗಾರರು ಈಗಾಗಲೆ ಬಳ್ಳಾರಿ, ರಾಯಚೂರು, ಬೆಂಗಳೂರುಗಳಲ್ಲಿ ರಾಜ್ಯಮಟ್ಟದ ಸಮಾವೇಶವನ್ನು ಜಾಗೃತಗೊಳಿಸಿವೆ.[೧೭] ಈ ಸಂಘಟನೆಗಳ ಹೇಳಿಕೆ ಪ್ರಕಾರ ಬುಡುಗ ಜಂಗಮರು ಪರಿಶಿಷ್ಟರೆ ಹೊರತು ಅಸ್ಪೃಶ್ಯರಲ್ಲ ಎಂಬ ಕಲ್ಪನೆ ಊರ ಜಂಗಮರಲ್ಲಿದೆ. ಆದರೂ ಮೀಸಲಾತಿಗಾಗಿ ಈ ಎರಡು ಸಂಘಟನೆಗಳ ನಡುವೆ ಹೋರಾಟ ನಡೆದಿರುವುದು ಗಮನಿಸಬೇಕಾದ ಅಂಶವಾಗಿದೆ.



### ೧೩. ದೇವತಾರಾಧನೆ

ಹಗಲುವೇಷಗಾರರು ತಾವು ನೆಲೆಯಾಗಿರುವ ಆಯಾ ಪ್ರದೇಶದ ಧರ್ಮ ಹಾಗೂ ದೇವರು ದೇವತೆಗಳನ್ನು ತಮ್ಮದನ್ನಾಗಿ ಮಾಡಿಕೊಂಡು ಆಚರಿಸುತ್ತಾ ಬಂದಿದ್ದಾರೆ. ಪರಂಪರೆಯಿಂದ ಬಂದ ಧಾರ್ಮಿಕ ಶ್ರದ್ಧೆಯೇ ಅವರ ಬಾಳಿಗೆ ಆಧಾರವಾಗಿದೆ. ಜೀವನದಲ್ಲಿ ಬರುವ ಕಷ್ಟಸುಖಗಳಿಗೂ, ಒಳಿತು ಕೆಡಕುಗಳಿಗೂ ಮೂಲಭೂತವಾದ ಅಗೋಚರವಾದ ಶಕ್ತಿಯೊಂದಿದೆ, ಅದರ ಇಚ್ಛೆಯ ಮೇರೆಗೆ ಅವೆಲ್ಲವುಗಳು ನಡೆಯುತ್ತವೆ, ಆ ಶಕ್ತಿಯ ವಿರುದ್ಧ ಹೋಗುವುದು ಅಸಾಧ್ಯ ಎಂಬುದನ್ನು ಹಗಲುವೇಷಗಾರರ ನಂಬಿಕೆ. ತಮ್ಮ ದಿನನಿತ್ಯದ ವ್ಯವಹಾರಗಳಲ್ಲಿಯೂ ದೈವತ್ವದ ಅಂಶವನ್ನು ಕಾಣುವ ಭಾವುಕ ಶಕ್ತಿ ಅವರದ್ದಾಗಿದೆ.[೧೮] ಹಗಲುವೇಷಗಾರರು ಶಕ್ತಿದೇವತೆಗಳ ಆರಾಧಕರಾಗಿದ್ದಾರೆ. ಅವರ ಕುಲ ಹಾಗೂ ಮನೆದೇವತೆ ಆದಿಶಕ್ತಿಯಾಗಿದ್ದಾಳೆ. ಆಕೆಯನ್ನು ಮಾತೃದೇವತೆ ಎಂದು ನಂಬಿದ್ದಾರೆ. ಅನೇಕ ಗ್ರಾಮದೇವತೆಗಳು ಅತಿ ಪ್ರಾಚೀನವಾದ ಭೂಮಿಪೂಜೆ ಅಥವಾ ಮಾತೃಪೂಜೆಯ ಕುರುಹುಗಳಲ್ಲದೆ ಬೇರೆಯಲ್ಲ. ಕೆಲವೊಮ್ಮೆ ಅವು ಫಲಶಕ್ತಿಯ ಸ್ಪಷ್ಟ ಪ್ರತೀಕಗಳಂತೆ ಕಾಣುತ್ತವೆ. ಅರಣ್ಯವಾಸಿಗಳಾದ ಬುಡಕಟ್ಟು ಜನಾಂಗಗಳು ಪೂಜಿಸುವ ಪ್ರೇತಾತ್ಮಗಳು ಗ್ರಾಮಸಮುದಾಯಗಳು ಬೆಳೆದ ಮೇಲೆ ಗ್ರಾಮದೇವತೆಗಳಾಗಿ ಮಾರ್ಪಾಟು ಹೊಂದಿರುವ ಸಾಧ್ಯತೆಗಳಿವೆ ಎಂದು ಹೇಳಿದ್ದಾರೆ.[೧೯] ಮನುಷ್ಯನ ಪ್ರಥಮ ಆರ್ಥಿಕ ಚಟುವಟಿಕೆಯಾದ ಆಹಾರ ಸಂಗ್ರಹಣೆಯ ಹಂತದಲ್ಲಿ ಸ್ತ್ರೀಯ ಪಾತ್ರ ಪ್ರಧಾನವಾಗಿತ್ತು. ಮಕ್ಕಳನ್ನು ಹೇರುವುದಲ್ಲದೆ, ಅವರನ್ನು ಪಾಲನೆಮಾಡುವ ಮತ್ತು ಬೆಳೆಸುವ ಹೊಣೆಗಾರಿಕೆ ಹಾಗೂ ಕೌಟುಂಬಿಕ ಕಾರ್ಯಚಟುವಟಿಕೆಗಳು ಹೆಣ್ಣಿನ ಮೂಲಕವೆ ಸಂವಹನಗೊಳ್ಳುತ್ತಿದ್ದವು. ಹೆಣ್ಣು ಒಂದು ಜನಾಂಗದ ಸಂಕೇತವಷ್ಟೇ ಅಲ್ಲ, ಜೀವೋತ್ಪತ್ತಿಯ ಮೂಲಶಕ್ತಿಯಾಗಿದ್ದಳು.[೨೦] ಸಮಾಜದ ಬೆಳವಣಿಗೆಯ ಮೊದಲ ಹಂತದಲ್ಲಿ ಮಾತೃವೇ ಧರ್ಮದ ಕೇಂದ್ರಸ್ಥಾನವಾಗಿದ್ದಳು. ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿ ಮಾನವ ಹೆಣ್ಣು ಮತ್ತು ಭೂಮಿ ಇವರೆಡಕ್ಕೂ ಪೂಜ್ಯ ವಸ್ತುಗಳೆಂದು ಭಾವಿಸಿದ.[೨೧] ಅಂದಿನಿಂದ ಹೆಣ್ಣು ಇಂದು ಪ್ರತಿಯೊಂದು

ಸಮುದಾಯದ ಮಾತೃದೇವತೆ ಮತ್ತು ಕುಲದೇವತೆಯಾಗಿ ರೂಪುಗೊಂಡಿದ್ದಾಳೆ. ಹಿಂದೂ ಸಮಾಜದ ಅಸ್ತಿತ್ವ ಧರ್ಮದ ಮೇಲೆ ನಿಂತುಕೊಂಡಿದೆ ಎಂದು ಹೇಳಿದರೆ ತಪ್ಪಾಗಲಾರದು. ಇದರ ಪೋಷಣೆ ಮಾನವ ಸಮಾಜದಲ್ಲಿ ಶತ ಶತಮಾನಗಳಿಂದಲೂ ಮುಂದುವರೆಯುತ್ತಾ ಬಂದಿದೆ.

ಬುಡಕಟ್ಟು ಜನರ ದೃಷ್ಟಿಯಲ್ಲಿ ದೇವರು ಅಲೌಕಿಕ, ಅಭೌತಿಕ, ಅತೀಂದ್ರಿಯ ವಸ್ತುವಾಗಲಿ, ಚೈತನ್ಯವಾಗಲಿ ಅಲ್ಲ. ತಮ್ಮ ಜೊತೆಗಿದ್ದು ತಮಗೆ ಸಾಕಷ್ಟು ಸಹಾಯ ಮಾಡಿದ ಹಿರಿಯರೇ ದೇವರು ಎಂದು ಈ ಸಮುದಾಯವು ನಂಬುತ್ತದೆ. ಹಗಲುವೇಷಗಾರರು ಹೆಣ್ಣು ದೇವತೆಗಳಾದ ಜಂಬಲಮ್ಮ, ಸುಂಕಲಮ್ಮ, ಪೋಲಮ್ಮ, ಯಲ್ಲಮ್ಮ, ಪಾಲಮ್ಮ ಮುಂತಾದ ದೇವತೆಗಳನ್ನು ತಮ್ಮ ಕುಲದೇವತೆ ಹಾಗೂ ಮನೆದೇವತೆಯನ್ನಾಗಿ ಪೂಜಿಸುತ್ತಾರೆ. ಇನ್ನು ಹಲವು ವೈಷ್ಣವ ಮತ್ತು ಶೈವ ದೇವರುಗಳಾದ ಅಂಜಿನಯ್ಯ, ಶ್ರೀಶೈಲ ಮಲ್ಲಿಕಾರ್ಜುನ, ಷಮಶಾಬಾದ್ ನೀಲಕಂಠಸ್ವಾಮಿ ಅಲ್ಲದೆ ಮುಸ್ಲಿಂ ದೇವತೆಗಳಾದ ಹುಸೇನಪ್ಪ, ಬಾಷಪ್ಪ, ಹುಸೇನ್‌ಸಾಬ್, ಕಾಜಪ್ಪ ಮೊದಲಾದವರನ್ನು ಪೂಜಿಸುತ್ತಾರೆ.

**ಜಂಬಲಮ್ಮ**

ಆದಿಶಕ್ತಿ ರೂಪವಾದ ಜಂಬಲಮ್ಮ ಹಗಲುವೇಷಗಾರರ ಕುಲದೇವತೆ ಹಾಗೂ ಮನೆದೇವತೆಯಾಗಿದ್ದಾಳೆ. ಈಕೆಯ ಮೂಲಸ್ಥಾನ ಆಂಧ್ರಪ್ರದೇಶವಾಗಿದೆ. ಈಕೆಯನ್ನು ಬೇಟೆ, ಹೆಂಡ, ಸಾರಾಯಿ ಮುಂತಾದವುಗಳೊಂದಿಗೆ ಆಚರಿಸುತ್ತಾರೆ. ಈ ದೇವತೆಯ ಆಚರಣೆ ಪ್ರತಿ ವರ್ಷಕ್ಕೊಮ್ಮೆ ನಡೆಯುತ್ತದೆ. ಈಕೆಯ ಹೆಸರಿನಲ್ಲಿ ಹರಕೆಯನ್ನು ಹೊತ್ತು (ಬೇಟೆಯನ್ನು ಬಿಡುವುದು) ಪ್ರತಿವರ್ಷ ಮಂಗಳವಾರ ಅಥವಾ ಶುಕ್ರವಾರ ಈಕೆಯ ಆಚರಣೆ ಮಾಡುತ್ತಾರೆ. ಈಕೆಯ ಆಚರಣೆಯಿಂದ ತಮ್ಮ ಬದುಕಿನಲ್ಲಿ ಬರುವ ಸಂಕಷ್ಟಗಳೂ ಪರಿಹಾರವಾಗುತ್ತವೆ ಎಂಬುದು ಈ ಜನರ ನಂಬಿಕೆಯಾಗಿದೆ. ಆಚರಣೆಯ ಸಂದರ್ಭದಲ್ಲಿ ಬೇಟೆಗೆ ಭಂಡಾರವನ್ನು ಹಾಕಿ ಕೊರಳಿಗೆ ಹೂವಿನ ಹಾರವನ್ನು ಹಾಕಿಕೊಂಡು ಜಂಬೆಮರಕ್ಕೆ ನಾಲ್ಕು ಕಲ್ಲುಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ನಂತರ ಬೇಟೆ(ಆಡುಮರಿ)ಯನ್ನು ಬಲಿಕೊಡುತ್ತಾರೆ. ಆ ದಿನ ಮನೆಯಲ್ಲಿ ಸಿಹಿ ಊಟವನ್ನು ಮಾಡಿ ರಾತ್ರಿ ಹೊತ್ತು ಮಾಂಸದ ಊಟಮಾಡಿ ಕುಲಸ್ಥರಿಗೆಲ್ಲಾ ಉಣಬಡಿಸುತ್ತಾರೆ.

**ಸುಂಕಲಮ್ಮ**

ಸುಂಕಲಮ್ಮ ಹಗಲುವೇಷಗಾರರ ಮನೆದೇವತೆಯಾಗಿದ್ದಾಳೆ. ಈಕೆಯನ್ನು ಪ್ರತಿವರ್ಷ ವಿಜಯದಶಮಿಯಂದು ಆಚರಿಸುತ್ತಾರೆ. ಜಂಬೆಗಿಡದ ಕೆಳಗೆ ನಾಲ್ಕು ಕಟ್ಟಿಗೆಗಳನ್ನು ಇಟ್ಟು ಅವುಗಳಿಗೆ ಸುಣ್ಣ, ಜಾಜಿ ಬಳಿದು, ಒಂದು ಮಡಕೆಯಲ್ಲಿ ಹೆಂಡ ಹಾಕಿ, ಅದಕ್ಕೆ ಸುಣ್ಣ, ಕೆಮ್ಮಣ್ಣು ಹಚ್ಚಿ

ಕಟ್ಟಿಗೆಗಳಿಂದ ಸಿಂಗರಿಸಿದ ಹಂದರದ ಒಳಗೆ ಇಡುತ್ತಾರೆ. ನಂತರ ಅದಕ್ಕೆ ದೀಪವನ್ನು ಹಚ್ಚಿ ಬೇಟೆಯನ್ನು ಬಲಿಕೊಡುತ್ತಾರೆ. ಬಲಿಕೊಟ್ಟ ಮೇಲೆ ಎಡೆಗೆ ಮಾಂಸವನ್ನು ಇಟ್ಟು ಹೆಂಡದ ಅಭಿಷೇಕ ಮಾಡುತ್ತಾರೆ.[೨೨] ನಂತರ ಕುಲಸ್ಥರೆಲ್ಲರೂ ಮಾಂಸದ ಊಟವನ್ನು ಮಾಡಿ ಸಾಮೂಹಿಕವಾಗಿ ಊಟಮಾಡಿ ಸುಂಕಲಮ್ಮ ದೇವತೆಯ ಆಚರಣೆಯನ್ನು ಮುಗಿಸುತ್ತಾರೆ.

## ಯಲ್ಲಮ್ಮ

ಈಕೆಯನ್ನು ಮಹಾನ್ ಆದಿಶಕ್ತಿದೇವತೆ ಎಂದು ಹಗಲುವೇಷಗಾರರು ಪೂಜಿಸುತ್ತಾರೆ. ಹುತ್ತ ಮತ್ತು ಬೇವಿನ ಮರವನ್ನು ಯಲ್ಲಮ್ಮನ ಪ್ರತಿರೂಪ ಎಂದು ಈ ಜನತೆ ಪೂಜೆ ಮಾಡುತ್ತಾರೆ. ಮುತ್ತೈದೆಹುಣ್ಣಿಮೆ ಅಥವಾ ದವನದ ಹುಣ್ಣಿಮೆಯಂದು ದೇವಿಯ ಪೂಜೆ ಪ್ರತಿವರ್ಷ ಮಾಡುತ್ತಾರೆ. ಯಲ್ಲಮ್ಮನನ್ನು ಅನ್ನಪೂರ್ಣದೇವತೆ ಭಕ್ತಾಧಿಗಳಿಗೆ ಮಾಡಿದ ಅಡುಗೆಯನ್ನು ಹೆಚ್ಚಿಸುವ ದೇವತೆ ಎನ್ನುವ ನಂಬಿಕೆ ಜನತೆ ಹೊಂದಿದ್ದಾರೆ.[೨೩] ಈಕೆಗೆ ಪ್ರತಿವರ್ಷ ತಮ್ಮ ಹರಕೆಯಂತೆ ಬೇಟೆಯನ್ನು ಬಿಡುತ್ತಾರೆ. ನಂತರ ಬಲಿಕೊಡುವಾಗ ಬೇಟೆಗೆ ಸಿಂಗಾರ ಮಾಡಿ ಕೊರಳಲ್ಲಿ ಬೇವಿನಹಾರವನ್ನು ಹಾಕಿ ಅದರ ಹಣೆಗೆ ಭಂಡಾರವನ್ನು ಹಚ್ಚುತ್ತಾರೆ. ಹೆಂಗಸರು ಆರತಿಯನ್ನು ಹಿಡಿದು ಮುಂದೆ ನಡೆಯುತ್ತಾರೆ. ಹಿಂದೆ ತಮ್ಮ ಭಜನೆ ಮೇಳದೊಂದಿಗೆ ಹುತ್ತಿಗೆ ಅಥವಾ ಬೇವಿನಮರಕ್ಕೆ ಹೋಗಿ ಅಲ್ಲಿ ಪೂಜೆ ಪುರಸ್ಕಾರಗಳನ್ನು ಮಾಡಿ ಬೇಟೆಯನ್ನು ಬಲಿಕೊಡುತ್ತಾರೆ. ನಂತರ ಬೇಟೆಯನ್ನು ಮನೆಗೆ ತಂದು ಮಾಂಸದ ಸಾರನ್ನು ಮಾಡಿ ಹೆಂಡ, ಸಾರಾಯಿಯೊಂದಿಗೆ ನೆರೆದ ಕುಲಸ್ಥರೆಲ್ಲರೂ ಊಟಮಾಡಿ ಯಲ್ಲಮ್ಮನ ಆಚರಣೆಯನ್ನು ಮುಗಿಸುತ್ತಾರೆ.ಇದೇ ರೀತಿ ಹಗಲುವೇಷಗಾರರು ಹುಲಿಗೆಮ್ಮ, ಮಾರೆಮ್ಮ, ಪೋಲಕಮ್ಮ, ಪಾಲಮ್ಮ ಮುಂತಾದ ಶಕ್ತಿದೇವತೆಗಳನ್ನು ಆಚರಿಸುತ್ತಾರೆ.

ಹೆಣ್ಣು ದೇವತೆಗಳಲ್ಲದೆ ಹಗಲುವೇಷಗಾರರು ಗಂಡು ದೇವತೆಗಳನ್ನು ಪೂಜಿಸುತ್ತಾರೆ. ಷಮಶಾಬಾದ್ ನೀಲಕಂಠಸ್ವಾಮಿ, ಶ್ರೀಶೈಲ ಮಲ್ಲಿಕಾರ್ಜುನ, ಅಂಜಿನಯ್ಯ ಮುಂತಾದ ಗಂಡು ದೇವರುಗಳನ್ನು ಪೂಜೆ ಮಾಡುತ್ತಾರೆ. ಷಮಶಾಬಾದ್ ನೀಲಕಂಠಸ್ವಾಮಿ ಇವರ ಕುಲಗುರುವಾಗಿದ್ದಾನೆ. ಪ್ರತಿವರ್ಷ ಆ ದೇವರಿಗೆ ಮುಡುಪನ್ನು ಕಟ್ಟಿಟ್ಟುಕೊಂಡು ಆಂಧ್ರಕ್ಕೆ ಹೋಗಿ ತಮ್ಮ ಮುಡುಪನ್ನು ಕೊಟ್ಟು ಜಾತ್ರೆಯನ್ನು ಆಚರಿಸಿ ಬರುತ್ತಾರೆ. ಅದರಂತೆ ಶ್ರೀಶೈಲ ಮಲ್ಲಿಕಾರ್ಜುನ ದೇವರಿಗೂ ನಡೆದುಕೊಳ್ಳುತ್ತಾರೆ. ಸಾಮಾನ್ಯವಾಗಿ ಇತರ ವರ್ಗದ ಜನರು ಆಚರಿಸುವ ಎಲ್ಲಾ ದೇವರುಗಳ ಆಚರಣೆಯಲ್ಲಿ ಈ ಸಮುದಾಯವೂ ಭಾಗವಹಿಸುತ್ತದೆ. ಈ ಜನತೆಯ ಮೇಲೆ ಶೈವ ಪಂಥದ ಪ್ರಭಾವ ಹೆಚ್ಚಾಗಿ ಕಂಡುಬರುತ್ತದೆ. ಈ ಜನತೆ ಕೆಲವು ಗಿಡಮರಗಳಾದ ಜಂಬೆಗಿಡ, ಬೇವಿನಗಿಡ ಇವುಗಳನ್ನು ಉರುವಲು ಬಳಸುವುದಿಲ್ಲ. ಇವುಗಳನ್ನು ಪೂಜ್ಯಭಾವನೆಯಿಂದ ನೋಡುತ್ತಾರೆ.

**ಅಡಿಟಿಪ್ಪಣಿ**

೧. ಮೌಖಿಕ ಸಂದರ್ಶನ, ದಿನಾಂಕ ೧.೧.೨೦೦೪, ರಾಮಣ್ಣ, ವಯಸ್ಸು ೪೭, ದೇವದುರ್ಗ

೨. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಬುಡಕಟ್ಟು ಸಂ.೨ ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು,೨೦೦೦ ಪುಟ-೬೩೭

೩. ಅದೇ ಪುಟ-೬೩೮

೪. ಮೌಖಿಕ ಸಂದರ್ಶನ, ಹನುಮಂತಿ, ವಯಸ್ಸು ೪೫, ದಿನಾಂಕ ೮.೧.೦೪, ಗಬ್ಬೂರು

೫. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪುಟ-೬೬

೬. ಅದೇ ಪುಟ, ೨೯,೩೩

೭. ಅದೇ ಪುಟ, ೪೦

೮. ಮೌಖಿಕ ಸಂದರ್ಶನ, ಬಸವಲಿಂಗಪ್ಪ, ವಯಸ್ಸು ೫೮, ದಿನಾಂಕ ೮.೧.೦೪, ಗಬ್ಬೂರು

೯. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪುಟ-೩೪

೧೦. ಬೋರಲಿಂಗಯ್ಯ ಹಿ.ಚಿ.ಸಂ. 'ಕರ್ನಾಟಕ ಜಾನಪದ ಕಲೆಗಳ ಕೋಶ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪುಟ-೨೫೩

೧೧. ಮೌಖಿಕ ಸಂದರ್ಶನ, ರಾಮಯ್ಯ, ವಯಸ್ಸು ೭೦, ದಿನಾಂಕ ೨೨.೧.೦೪, ದೇವದುರ್ಗ

೧೨. ಕೂಸಣ್ಣ ದಾಸನೂರು, 'ಶೋಷಿತ ಜಂಗಮರ ಮೀಸಲಾತಿ', ಮಾತಂಗ ಪ್ರಕಾಶನ ಮೈಸೂರು. ೨೦೦೦, ಪುಟ-೧೮೨

೧೩. ಅದೇ ಪುಟ, ೧೫೫

೧೪. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪುಟ-೧೧

೧೫. ಅದೇ ಪುಟ, ೧೧

೧೬. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦, ಪುಟ-೬೨೮

೧೭. ಕೂಸಣ್ಣ ದಾಸನೂರು, 'ಶೋಷಿತ ಜಂಗಮರ ಮೀಸಲಾತಿ', ಮಾತಂಗ ಪ್ರಕಾಶನ, ಮೈಸೂರು, ೨೦೦೦, ಪುಟ-೧೦೧

೧೮. ಖಂಡೋಬಾ ಪಿ.ಕೆ., 'ಕರ್ನಾಟಕದ ಲಂಬಾಣಿಗಳು : ಒಂದು ಸಾಂಸ್ಕೃತಿಕ ಅಧ್ಯಯನ', ತೇಜ್‌ಸಿಂಗ್ ರಾಠೋಡ್ ಮೇಮೋರಿಯಲ್ ಟ್ರಸ್ಟ್, ಗುಲ್ಬರ್ಗಾ, ೧೯೯೧, ಪುಟ-೯೨

೧೯. ಸಿದ್ದಲಿಂಗಯ್ಯ, 'ಗ್ರಾಮದೇವತೆಗಳು', ಮೂಲಭಾರತಿ ಪ್ರಕಾಶನ, ಬೆಂಗಳೂರು, ೨೦೦೦, ಪುಟ-೧೬

೨೦. ಅದೇ ಪುಟ, ೯೯

೨೧. ಅದೇ ಪುಟ, ೩೩೧

೨೨. ಅದೇ ಪುಟ, ೨೯೯

೨೩. ಅದೇ ಪುಟ, ೩೩೧

***

ಅಧ್ಯಾಯ ೪

# ಹಗಲುವೇಷಗಾರರ ಆರ್ಥಿಕ ಬದುಕು

ಹಗಲುವೇಷಗಾರರ ಆರ್ಥಿಕ ಮಟ್ಟ ತೀರ ಕೆಳಹಂತದ್ದು. ವೇಷಗಾರಿಕೆಯನ್ನು ಪ್ರಧಾನ ವೃತ್ತಿಯನ್ನಾಗಿಟ್ಟುಕೊಂಡು, ಅದರಲ್ಲೇ ತಮ್ಮ ಬದುಕನ್ನು ಕಂಡುಕೊಂಡ ಈ ಸಮುದಾಯ ಹಲವಾರು ರೀತಿಯ ಸಮಸ್ಯೆಗಳಿಗೆ ಒಳಗಾಗಬೇಕಾಯಿತು. ಅವುಗಳೆಂದರೆ, ಆಧುನಿಕತೆಯ ಪ್ರವೇಶ, ಹೊಸ ಸಾಮಾಜಿಕ-ಆರ್ಥಿಕ ಸಂಬಂಧಗಳು, ಜನಸಂಖ್ಯೆಯ ಹೆಚ್ಚಳ ಮುಂತಾದವು. ಹೊಸ ಬದಲಾವಣೆಗಳೊಂದಿಗೆ ಮುಖಾಮುಖಿಯಾಗುವಲ್ಲಿ ಈ ಸಮುದಾಯ ವಿಫಲವಾಯಿತು. ವೇಷಗಾರಿಕೆ, ಪಶುಸಂಗೋಪನೆ, ಬೇಟೆ ಮುಂತಾದ ವೃತ್ತಿಗಳು ಈ ಸಮುದಾಯಕ್ಕೆ ಜೀವನ ನಿರ್ವಹಣೆಗೆ ನೆರವಾದರೂ, ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕೆ ಹಾಗೂ ತಮ್ಮ ಧ್ವನಿಗಳನ್ನು ದಾಖಲಿಸುವುದಕ್ಕೆ ಬೇಕಾದ ಸಾಮರ್ಥ್ಯವನ್ನು ತಂದುಕೊಡಲಿಲ್ಲ. ಪಾರಂಪರಿಕವಾಗಿ ಬಂದ ಈ ವೃತ್ತಿಗಳನ್ನು ಆಕರ್ಷಕವನ್ನಾಗಿಸುವ, ಅವುಗಳ ಜೊತೆ ಹೊಸ ವೃತ್ತಿಗಳನ್ನು ಹುಡುಕುವ ಪ್ರಯತ್ನ ಮುಂದುವರಿದಿದೆ. ಆದರೆ ಜಾತಿ ಆಧಾರಿತ ಸಮಾಜ ವ್ಯವಸ್ಥೆಯಲ್ಲಿ ಇಂಥ ಸಮುದಾಯಗಳು ಬದುಕಿಗೊಂದು ಸ್ಪಷ್ಟ ಚಿತ್ರಣವನ್ನು ಕಾಣುವುದು ಸುಲಭದ ಕೆಲಸವಲ್ಲ.

**ವೇಷಗಾರಿಕೆ**

ಹಗಲುವೇಷಗಾರರ ಆರ್ಥಿಕ ಬದುಕು ಮುಖ್ಯವಾಗಿ ವೇಷಗಾರಿಕೆಯನ್ನೇ ಅವಲಂಬಿಸಿ ಕೊಂಡಿರುವಂತದ್ದು. ಅದು ಆ ಸಮುದಾಯ ತಮ್ಮ ಪೂರ್ವಜರಿಂದ ಬಳುವಳಿಯಾಗಿ ಪಡೆದ ಒಂದು ಪ್ರಮುಖ ವೃತ್ತಿ. ತಮ್ಮ ದೈನಂದಿನ ಬದುಕನ್ನು ಸಾಗಿಸುವುದೇ ಆ ವೃತ್ತಿಯಿಂದ. ಹಾಗಾಗಿ ಅವರದು ವೇಷಗಾರಿಕೆಯನ್ನಾಧರಿಸಿದ ಅರ್ಥವ್ಯವಸ್ಥೆ. ಈ ಜನಾಂಗವು ಊರಿಂದ ಊರಿಗೆ ಸಂಚರಿಸುತ್ತಾ ಒಂದೊಂದು ಊರಿನಲ್ಲಿ ಸುಮಾರು ಮೂರು ತಿಂಗಳು ಕಾಲ ಉಳಿಯುತ್ತಾರೆ. ಮೊದಲಿಗೆ ತಾವು ನೆಲೆಯೂರಿದ ಊರಿನ ಗಣ್ಯರನ್ನು ಭೇಟಿಯಾಗಿ ತಮ್ಮ ಕಲೆಯನ್ನು ಪ್ರದರ್ಶನ ಮಾಡಲು ಒಪ್ಪಿಗೆ ಪಡೆದುಕೊಂಡು, ನಂತರ ದಿನಕ್ಕೊಂದು ವೇಷದಂತೆ ಸುಮಾರು ೩೩ ವೇಷಗಳನ್ನು ಹಾಕಿಕೊಂಡು ಊರಿನ ಮನೆ ಮನೆಯ ಮುಂದೆ ಕಲೆ ಪ್ರದರ್ಶನ ಮಾಡುತ್ತಾರೆ. ಇವರು ಪ್ರದರ್ಶನ ಮಾಡುವ ಕಲೆಗಳೆಂದರೆ, ೧. ರಾಮರಾವಣರ ಯುದ್ಧದ ಸನ್ನಿವೇಶ ೨. ಭಸ್ಮಾಸುರನ ವಧೆ ೩. ಜಟಾಸುರನ ವಧೆ ೪. ವಶಿಷ್ಠವಿಶ್ವಾಮಿತ್ರನ ಕಥೆ

೫. ಸಿಂಧೂರ ಲಕ್ಷ್ಮಣನ ಚರಿತ್ರೆ ೬. ಸುಂದ ಉಪಸುಂದರನ ಕಥೆ ೭. ಅಗಸರ ನಂದವ್ವನ ಕಥೆ ೮. ವಾಲಿಸುಗ್ರೀವರ ಯುದ್ಧದ ಸನ್ನಿವೇಶ ೯. ಲವಕುಶರ ಕಾಳಗ ೧೦. ದಾನಶೂರಕರ್ಣನ ಚರಿತ್ರೆ ೧೧. ಕಿರಾತಾರ್ಜುನವಿಜಯ ೧೨. ಜಂಗಮವೇಷದ ಸನ್ನಿವೇಶ ೧೩. ಮೋಹಿನಿಯ ಸನ್ನಿವೇಶ ಹೀಗೆ ಜಾತಿಗೊಂದು ವೇಷದಂತೆ ೩೩ ವೇಷಗಳನ್ನು ಹಾಕಿ ದಿನಕ್ಕೊಂದು ವೇಷವನ್ನು ಪ್ರದರ್ಶನ ಮಾಡುತ್ತಾರೆ.[1] ಇವರು ತಮ್ಮ ವೇಷಗಳಿಗೆ ಬೇಕಾಗುವ ವಿವಿಧ ಸಾಮಾಗ್ರಿಗಳನ್ನು ತಾವೆ ತಯಾರಿಸಿಕೊಳ್ಳುತ್ತಾರೆ. ಅಂತೆಯೇ ವೇಷಗಳಿಗೆ ತಕ್ಕಂತೆ ವಿವಿಧ ರೀತಿಯ ಬಣ್ಣಗಳನ್ನು ತಾವೆ ತಯಾರಿಸಿಕೊಳ್ಳುತ್ತಾರೆ. ತಮ್ಮ ಸಂಗೀತ ವಾದ್ಯಗಳೊಂದಿಗೆ ಊರಲ್ಲಿ ಕಲೆ ಪ್ರದರ್ಶನ ಮಾಡಿ ಬರುತ್ತಾರೆ. ಅವರಲ್ಲಿ ನಿಮ್ಮ ಕಲೆಯ ಪ್ರದರ್ಶನದ ಮುಖ್ಯ ಉದ್ದೇಶವೇನೆಂದು ಕೇಳಿದರೆ, ಪುರಾತನ ಕಥೆಗಳನ್ನು ಜನರಿಗೆ ಮನದಟ್ಟು ಮಾಡಿಕೊಡುವುದು, ಮನರಂಜನೆಯನ್ನು ನೀಡುವುದು ಜೊತೆಗೆ ನಮ್ಮ ಹೊಟ್ಟೆಯನ್ನು ತುಂಬಿಸಿ ಕೊಳ್ಳುವುದು ಎಂದು ಹೇಳುತ್ತಾರೆ. ಇವರು ತಮ್ಮ ಕಲೆಯನ್ನು ಯಾವುದೇ ವೇದಿಕೆ ಇಲ್ಲದೆ, ಪರದೆಯಿಲ್ಲದೆ, ಝುಗಝುಗಿಸುವ ದೀಪಾಲಂಕಾರವಿಲ್ಲದೆ ಜನರ ಮನಸ್ಸು ಸೂರೆಗೊಳ್ಳುವಂತೆ ಇಂಪಾದ ಸಂಗೀತ ವಾದ್ಯಗಳಿಂದ ಹಾಡುತ್ತ ಕುಣಿಯುತ್ತಾ ತಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಾರೆ. ತಮ್ಮ ಕಲೆಯನ್ನು ಪ್ರದರ್ಶನ ಮಾಡಿದ ನಂತರ ಮನೆ ಮನೆಯನ್ನು ಸುತ್ತಾಡಿ ದಾನದ ರೂಪದಲ್ಲಿ ಹಣ, ದವಸಧಾನ್ಯ, ಬಟ್ಟೆಗಳನ್ನು, ದನಕರುಗಳನ್ನು, ಆಡು, ಕುರಿ, ಕೋಳಿಗಳನ್ನು ಪಡೆದುಕೊಂಡು ಬರುತ್ತಾರೆ. ಬಂದಂತಹ ದಾನದಲ್ಲಿ ಎಲ್ಲರು ಹಂಚಿಕೊಂಡು ತಮ್ಮ ಆರ್ಥಿಕ ಬದುಕನ್ನು ತುಂಬಿಕೊಳ್ಳುತ್ತಾರೆ. ಹಿಂದೆ ಇವರ ಕಲೆಗೆ ಹೆಚ್ಚಿನ ಪ್ರೋತ್ಸಾಹ ಸಮಾಜದಲ್ಲಿ ಇತ್ತು. ಇವರ ಕಲೆಯನ್ನು ಮೆಚ್ಚಿ ಜನತೆ ಉದಾರವಾದ ಆರ್ಥಿಕ ನೆರವನ್ನು ನೀಡುತ್ತಿದ್ದರು. ಆದರೆ ಇಂದು ಪರಿಸ್ಥಿತಿ ಬದಲಾಗಿ ಹಲವು ಯಾಂತ್ರಿಕ ಮಾಧ್ಯಮಗಳು ಹುಟ್ಟಿಕೊಂಡು ಇವರ ಕಲೆ ಬೆಲೆ ಕಳೆದುಕೊಳ್ಳುವಂತಾಗಿದೆ. ಇಂದು ಜನತೆ ಸಿನಿಮಾ, ಟಿ.ವಿ, ರೇಡಿಯೋ ಮೊದಲಾದ ಯಾಂತ್ರಿಕ ಮಾಧ್ಯಮಗಳಿಗೆ ಮಾರು ಹೋಗಿದ್ದಾರೆ. ಇದರಿಂದ ವೇಷಗಾರರ ಕಲೆಯು ಜನಮನ್ನಣೆಯನ್ನು ಕಳೆದುಕೊಂಡು ಒಪ್ಪತ್ತಿನ ಗಂಜಿಗೂ ಪರದಾಡುವ ಸ್ಥಿತಿಗೆ ತಲುಪಿದ್ದಾರೆ. ಹಗಲುವೇಷಧಾರಿಗಳ ಬದುಕು ಪೂರ್ಣಬೀದಿಗೆ ಬಂದಂತಾಗಿದೆ. 'ಏನ್ ಮಾಡೋದ್ರಿ ನಾವು ಹಚ್ಚಿಕೊಂಡ ಬಣ್ಣದ ರೊಕ್ಕ ಕೂಡ ಸಂಪಾದನೆ ಆಗುತ್ತಿಲ್ಲ. ಇಂತಹ ಸ್ಥಿತಿಯಲ್ಲಿ ಒಂದೊತ್ತಿನ ಊಟಕ್ಕೂ ಗತಿಯಿಲ್ಲ. ಇನ್ನು ಮಕ್ಕಳನ್ನು ಎಲ್ಲಿ ಶಾಲೆಗೆ ಕಳಿಸುವುದು.' ಇಂದು ಜನ ನಮ್ಮ ಕಲೆಯನ್ನು ಕೇವಲ ಮನರಂಜನೆಯನ್ನಾಗಿ ಪಡೆಯುತ್ತದೆ ವಿನಾಃ ಆರ್ಥಿಕ ನೆರವು ನೀಡುವುದಿಲ್ಲ ಎನ್ನುವ ಅಸಮಾಧಾನವನ್ನು ವ್ಯಕ್ತಪಡಿಸುತ್ತಾ ಎಷ್ಟೆ ಕಷ್ಟ ಬಂದರೂ ಸರಿ ನಾವು ಮಾತ್ರ ನಮ್ಮ ಕುಲಕಸುಬನ್ನು ಕೈಬಿಡುವುದಿಲ್ಲ ಎಂದು ಅಭಿಮಾನದಿಂದ ತಮ್ಮ ವೃತ್ತಿಯ ಬಗ್ಗೆ ಹೇಳುತ್ತಾರೆ. ಇಂದು ಈ ಊರು ನಾಳೆ ಮತ್ತೊಂದು ಊರು ಎನ್ನುತ್ತ ತಮ್ಮ ಬದುಕಿನ ಆಳಲನ್ನು ತೋಡಿಕೊಳ್ಳುತ್ತಾರೆ.

ಹಿಂದಿನ ಕಾಲದಲ್ಲಿ ಸಿನಿಮಾಗಳಾಗಲಿ, ಪ್ರಚಾರ ಮಾಧ್ಯಮಗಳಾಗಲಿ ಇದ್ದಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ನಮ್ಮ ಕಲೆಗೆ ಹೆಚ್ಚಿನ ಪ್ರೋತ್ಸಾಹವಿತ್ತು ನಮ್ಮ ಕಲೆಯನ್ನು ಪ್ರದರ್ಶನ ಮಾಡುತ್ತಾ ಗತಕಾಲದ ಇತಿಹಾಸ ನೆನಪು ಮಾಡಿಕೊಡುತ್ತಾ ಜನರಿಗೆ ಮನರಂಜನೆಯನ್ನು ನೀಡಿ ಹೆಚ್ಚಿನ ಪ್ರಮಾಣದಲ್ಲಿ ಉದಾರವಾದ ಆರ್ಥಿಕ ನೆರವನ್ನು ಪಡೆಯುತ್ತಿದ್ದೆವು. ಇಂದು ಸಿನೆಮಾ, ಟಿ.ವಿ, ರೇಡಿಯೊ ಮೊದಲಾದ ಮಾಧ್ಯಮಗಳು ಹುಟ್ಟಿಕೊಂಡಿದ್ದರಿಂದ ಗ್ರಾಮೀಣ ಪ್ರದೇಶದಲ್ಲಿ ಕೂಡ ನಮ್ಮ ಕಲೆಗೆ ಬೆಲೆಯಿಲ್ಲದಂತಾಗಿ ನಮ್ಮ ಬದುಕು ಅತಂತ್ರ ಸ್ಥಿತಿಗೆ ತಲುಪಿದೆ. ನಮ್ಮನ್ನು ನಮ್ಮ ಕಲೆಯನ್ನು ಜನತೆ ಮರೆಯತೊಡಗಿದ್ದಾರೆ. ಇದರಿಂದ ನಮ್ಮ ಕುಟುಂಬದ ಜೀವನ ಸಾಗಿಸುವುದು ತುಂಬಾ ಕಷ್ಟವಾಗಿದೆ. ಹಿಂದೆ ನಮ್ಮ ಜನಸಂಖ್ಯೆ ಕಡಿಮೆ ಇತ್ತು ಜೊತೆಗೆ ಉದಾರವಾದ ಆರ್ಥಿಕ ನೆರವು ದೊರೆಯುತ್ತಿತ್ತು. ಎಲ್ಲಾರು ಒಟ್ಟಿಗೆ ಕಲೆಯನ್ನು ಪ್ರದರ್ಶನವನ್ನು ಮಾಡಿ ಬಂದಂತಹ ನೆರವಿನಲ್ಲಿ ಸುಖ ಜೀವನ ನಡೆಸುತ್ತಿದ್ದೆವು. ಆದರೆ ಇಂದು ನಮ್ಮ ಜನಸಂಖ್ಯೆ ಹೆಚ್ಚಾಗಿ ನೆರವು ಇಲ್ಲದಂತಾಗಿ ಒಪ್ಪತ್ತಿನ ಊಟಕ್ಕೂ ಪರದಾಡುವ ಸ್ಥಿತಿ ತಲುಪಿದ್ದೇವೆ. ಸರಕಾರದ ಸವಲತ್ತುಗಳಿಂದ ವಂಚಿತರಾಗಿ ತಲೆಯ ಮೇಲೊಂದು ಸೂರಿಲ್ಲ, ಇರಲೊಂದು ನೆಲೆ ಇಲ್ಲ, ಹೊಟ್ಟೆ ತುಂಬಾ ಅನ್ನವಿಲ್ಲ, ಮೈ ತುಂಬಾ ಬಟ್ಟೆ ಇಲ್ಲ, ಇನ್ನು ನಮ್ಮ ಮಕ್ಕಳಿಗೆ ಶಿಕ್ಷಣ ಕಲಿಸುವುದಂತು ದೂರವೇ ಉಳಿಯಿತು. ಓದು ಬರಹವನ್ನು ಯಾವ ಶಾಲೆಗೆ ಹೋಗದೆ ನಮ್ಮ ಕುಟುಂಬದ ಸದಸ್ಯರಿಂದ ಅಲ್ಪಸ್ವಲ್ಪ ಕಲಿತು ನಮ್ಮ ಪಾತ್ರಗಳ ಸಂಭಾಷಣೆಗಳನ್ನು ಕಂಠಪಾಠ ಮಾಡಿ ನಮ್ಮ ಕಲೆಯನ್ನು ಬಿಡದೆ ಜೀವನ ಸಾಗಿಸುತ್ತಿದ್ದೇವೆ. ತಂಗಳ ಆಹಾರವನ್ನು ತಿಂದು ಅನಾರೋಗ್ಯಕ್ಕೆ ಈಡಾದಾಗ ಖರ್ಚಿಗೆ ಹಣವಿಲ್ಲ. ಸರಕಾರ ಕೇವಲ ಪಾಶ್ಚಿಮಾತ್ಯ ಮಾಧ್ಯಮಗಳಿಗೆ ಪ್ರೋತ್ಸಾಹ ನೀಡುತ್ತಿದೆ. ಪುರಾತನ ಕಲೆಯನ್ನು ಉಳಿಸಿಕೊಂಡು ಬಂದು ಗತಕಾಲದ ಇತಿಹಾಸದ ನೆನಪು ಮಾಡಿಕೊಡುವಂತಹ ಬಡ ಕಲಾವಿದರಿಗೆ ಪ್ರೋತ್ಸಾಹ ನೀಡುತ್ತಿಲ್ಲ. ಇಂತಹ ಸ್ಥಿತಿಯಲ್ಲಿ ನಮ್ಮ ಬದುಕಿನ ಬವಣೆಯನ್ನು ಸಾಗಿಸುತ್ತಿದ್ದೇವೆ ಎಂದು ತಮ್ಮ ವೇದನೆಯನ್ನು ವ್ಯಕ್ತಪಡಿಸುತ್ತಾರೆ. ಆದರೂ ತಮ್ಮ ಕುಲಕಸುಬನ್ನು ಕೈ ಬಿಡದೆ ಉಳಿಸಿಕೊಂಡು ಬಂದಿದ್ದಾರೆ.

**ಭಿಕ್ಷಾಟನೆ**

ಭಿಕ್ಷಾಟನೆ ಹಗಲುವೇಷಗಾರ ಜನಸಮುದಾಯದಲ್ಲಿ ಒಂದು ಪ್ರಮುಖ ವೃತ್ತಿಯಾಗಿ ಬೆಳೆದುಕೊಂಡು ಬಂದಿದೆ. ಗಂಡಸರು ತಮ್ಮ ವೇಷ ಪ್ರದರ್ಶನದ ಮುಖಾಂತರ ಜೀವನಾಧಾರವನ್ನು ಪಡೆದರೆ, ಇತ್ತ ಹೆಂಗಸರು ತಾವೇ ತಮ್ಮ ಕೈಯಿಂದ ಒಲಿದು ಸಿದ್ಧಪಡಿಸಿಕೊಂಡ ಜೋಳಿಗೆಯನ್ನು ಕೊಂಕುಳಲ್ಲಿ ಹಾಕಿಕೊಂಡು ಇಬ್ಬರು ಇಲ್ಲವೆ ಮೂರು ಜನ ಒಟ್ಟಿಗೆ ಸೇರಿಕೊಂಡು ಕೈಯಲ್ಲಿ ವೀಣೆಯಾಕಾರದ ತಂಬೂರಿ, ಗಗ್ಗರ ಹಾಗೂ ಬುಡ್ಡವನ್ನು ಹಿಡಿದುಕೊಂಡು ಬೆಳಿಗ್ಗೆ ಹೊತ್ತು ಊರನ್ನು ಪ್ರವೇಶ ಮಾಡಿ ಮನೆ ಮನೆಯ ಮುಂದೆ ಹಾಡುಗಳನ್ನು ಹಾಗೂ ಕಥೆಗಳನ್ನು ಹೇಳುತ್ತಾ ಊರಿನಲ್ಲಿ ಕೊಟ್ಟ

ದವಸಧಾನ್ಯಗಳನ್ನು ಹಾಗು ಆಹಾರವನ್ನು ತೆಗೆದುಕೊಂಡು ಮನೆಗೆ ಬಂದು ಗಂಡ ಹೆಂಡತಿ ಹಾಗೂ ಮಕ್ಕಳು ಒಟ್ಟಿಗೆ ಕುಳಿತುಕೊಂಡು ಊಟ ಮಾಡುತ್ತಾರೆ. ಇವರಿಗೆ ಹೆಚ್ಚಾಗಿ ಬೇಯಿಸಿದ ಆಹಾರ ಊರಲ್ಲಿ ದೊರೆಯುತ್ತದೆ. ಹಬ್ಬ ಹರಿದಿನಗಳಲ್ಲಿ ಇವರಿಗೆ ವಿಶೇಷ ಸಿಹಿ ಊಟ ದೊರೆಯುತ್ತದೆ. ಏಕೆಂದರೆ ಈ ಜನತೆಗೆ ಹಬ್ಬ ಹುಣ್ಣಿಮೆ ಆಚರಿಸುವುದು ಕನಸಿನ ಮಾತಾಗಿದೆ. ಭಿಕ್ಷಾಟನೆಯನ್ನು ನೀವು ತ್ಯಜಿಸಿ ಬೇರೆ ಆದಾಯ ಬರುವ ಉದ್ಯೋಗದಿಂದ ನಿಮ್ಮ ಹೊಟ್ಟೆಯನ್ನು ತುಂಬಿಸಿಕೊಳ್ಳಬಹುದಲ್ಲವೇ ಎನ್ನುವ ಪ್ರಶ್ನೆಯನ್ನು ಹಾಕಿದಾಗ ಭಿಕ್ಷಾಟನೆಯನ್ನು ನಾವು ಅನುಸರಿಸುವುದು ನಮ್ಮ ಸೋಮಾರಿತನದಿಂದ ಅಲ್ಲ. ಅದು ನಮ್ಮ ಹಿರಿಯರು ತಲಾತಲಾಂತರದಿಂದ ಅನುಸರಿಸಿಕೊಂಡು ಬಂದ ಕಾಯಕ ಅದನ್ನು ಬಿಟ್ಟರೆ ನಮ್ಮ ಕುಲವೃತ್ತಿಗೆ ಅವಮಾನ ಮಾಡಿದಂತೆ ಎನ್ನುತ್ತಾರೆ. ಭಿಕ್ಷಾಟನೆ ನಮ್ಮ ಕಾಯಕ, ಅದನ್ನು ನಾವು ಎಂತಹ ಸ್ಥಿತಿ ಬಂದರೂ ಬಿಡಲಾರೆವು ಎನ್ನುತ್ತಾರೆ. ಇತ್ತೀಚೆಗೆ ಇವರ ಜನಸಂಖ್ಯೆಯಲ್ಲಿ ಹೆಚ್ಚಳ ಕಂಡುಬಂದಿದ್ದರಿಂದ ಹಗಲುವೇಷಗಾರರ ಹೆಣ್ಣುಮಕ್ಕಳು ಕೃಷಿಕಾರ್ಮಿಕರಾಗಿ ಭೂಮಾಲೀಕರ ಹೊಲದಲ್ಲಿ ದುಡಿಯಲು ಹೋಗುತ್ತಿರುವುದು ಕಂಡು ಬರುತ್ತದೆ. ಜೊತೆಗೆ ತಮ್ಮ ಭಿಕ್ಷಾಟನೆಯನ್ನು ಕೂಡ ಮೈಗೂಡಿಸಿಕೊಂಡು ತಮ್ಮ ಆರ್ಥಿಕಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಿದ್ದಾರೆ. ಮಕ್ಕಳು ಕೂಡ ತಮ್ಮ ತಂದೆತಾಯಿಗಳ ಕಾಯಕವನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ. ಮಕ್ಕಳು ಶಿಕ್ಷಣ ಪಡೆಯಬೇಕಾದ ವಯಸ್ಸಿನಲ್ಲಿ ಹೊಟ್ಟೆಪಾಡಿಗಾಗಿ ಬಾಲಕಾರ್ಮಿಕರಾಗಿ ಭಿಕ್ಷಾಟನೆಯಲ್ಲಿ ತೊಡಗಿರುವುದು ಒಂದು ವಿಷಾದದ ಸಂಗತಿಯೇ ಆಗಿದೆ. ಇಂತಹ ಹೀನಾಯಸ್ಥಿತಿಯಲ್ಲಿ ಈ ಜನ ಸಮೂಹ ಬದುಕಬೇಕಾಗಿದೆ.

ಭಿಕ್ಷಾಟನೆಯ ಜೊತೆಗೆ ಹೆಣ್ಣು ಮಕ್ಕಳು ಬುರ್‍ರಾ ಕಥೆಗಳನ್ನು ಹೇಳುತ್ತಾರೆ. ಗಂಡಸರು ವೇಷ ಪ್ರದರ್ಶನ ಕೈಗೊಂಡರೆ ಹೆಣ್ಣು ಮಕ್ಕಳು ಊರಲ್ಲಿ ಯಾರಾದರೂ ಶ್ರೀಮಂತರು, ಗೌಡರು ಕಥೆಯನ್ನು ಹೇಳಲು ಆಹ್ವಾನ ನೀಡಿದರೆ ಅವರ ಮನೆಗೆ ಕಥೆಯನ್ನು ಹೇಳಲು ಹೋಗುತ್ತಾರೆ. ಈ ಕಥೆಯನ್ನು ರಾತ್ರಿಯ ವೇಳೆಯಲ್ಲಿ ಹೇಳುತ್ತಾರೆ. ರಾತ್ರಿ ಸುಮಾರು ಹತ್ತು ಗಂಟೆಯ ನಂತರ ಊಟ ಮಾಡಿಕೊಂಡು ಆಹ್ವಾನ ನೀಡಿದವರ ಮನೆಗೆ ಎರಡರಿಂದ ಮೂರು ಜನ ಹೆಣ್ಣು ಮಕ್ಕಳು ಕೈಯಲ್ಲಿ ವೀಣೆಯಾಕಾರದ ತಂಬೂರಿಯನ್ನು ಗಗ್ಗರವನ್ನು ಹಾಗೂ ಬುಡ್ಗವನ್ನು ತೆಗೆದುಕೊಂಡು ಹೋಗುತ್ತಾರೆ. ಇವರು ಕಥೆ ಹೇಳುವುದಕ್ಕೆ ಯಾವುದೇ ರಂಗಸಜ್ಜಿಕೆ ಬೇಕಾಗಿಲ್ಲ. ಮನೆಯ ಜಗಲಿ, ಪಡಸಾಲೆ ಅಥವಾ ದೇವಸ್ಥಾನಗಳಲ್ಲಿ ಹೇಳುತ್ತಾರೆ. ಈ ರೀತಿ ಬುರ್‍ರಾ ಕಥೆ ಹೇಳಿಸುವುದರಿಂದ ಸಮೃದ್ಧಿಯಾಗಿ ಮಳೆ ಬರುತ್ತದೆ ಎಂಬ ನಂಬಿಕೆ ಜನರಿಗೆ ಇದೆ. ಸಾಮಾನ್ಯವಾಗಿ ಇವರು ಪೌರಾಣಿಕ ಕಥೆಗಳನ್ನು ಹಾಗೂ ರಾಜರ ಜೀವನ ಚರಿತ್ರೆಯನ್ನು ಒಳಗೊಂಡ ಕಥೆಗಳನ್ನು ಹೇಳುತ್ತಾರೆ. ಬಾಲನಾಗಮ್ಮನ ಕಥೆ, ಕುಮಾರರಾಮನ ಕಥೆ, ನಳಮಹಾರಾಜನ ಕಥೆ, ಚಿತ್ರಶೇಖರನ ಕಥೆ, ಸತ್ಯ ಹರಿಶ್ಚಂದ್ರನ ಕಥೆ, ಪಾಂಡವರ ವನವಾಸದ ಕಥೆ, ಗಂಗೆ, ಗೌರಮ್ಮನ ಕಥೆ, [illegible] ಕಥೆ, [illegible] ಕಥೆ, [illegible] ಕಥೆ [illegible] ಕಥೆಗಳನ್ನು ಹೇಳುತ್ತಾರೆ.[೭] ಈ ಕಥೆಗಳನ್ನು ಹೇಳುವಾಗ ಒಗಟಿನ ರೀತಿಯಲ್ಲಿ ಸಂಭಾಷಣೆ ಹೇಳುತ್ತಾ ವಾದ್ಯಗಳನ್ನು

ನುಡಿಸುತ್ತಾ ಹೇಳುತ್ತಾರೆ. ಒಂದು ಬಾರಿ ಕಥೆ ಹೇಳಲಿಕ್ಕೆ ಪ್ರಾರಂಭಿಸಿದರೆ ಕಥೆ ಮುಗಿಯುವವರೆಗೆ ಆ ಜಾಗವನ್ನು ಬಿಟ್ಟು ಬರುವುದಿಲ್ಲ. ಯಾವುದೇ ಸಂದರ್ಭಕ್ಕೂ ಕಥೆಯನ್ನು ಅರ್ಧಕ್ಕೆ ನಿಲ್ಲಿಸುವುದಿಲ್ಲ. ಕಥೆ ಮುಗಿದ ಮೇಲೆ ಆಹ್ವಾನ ನೀಡಿದ ವ್ಯಕ್ತಿಯು ಅವರಿಗೆ ಊಟ ಉಪಚಾರವನ್ನು ಮಾಡಿಸಿ, ದಾನದ ರೂಪದಲ್ಲಿ ಹಣ, ಧಾನ್ಯವನ್ನಾಗಲಿ, ಇಲ್ಲವೆ ಆಕಳು, ಕುರಿಮೇಕೆಗಳನ್ನು, ಬಟ್ಟೆಗಳನ್ನು ಕೊಟ್ಟು ಕಳುಹಿಸುತ್ತಾರೆ. ಆ ಸಂದರ್ಭದಲ್ಲಿ ದಾನ ಕೊಟ್ಟಂತ ವ್ಯಕ್ತಿಯ ಹೆಸರಿನಲ್ಲಿ ಆತನಿಗೆ ಶುಭವಾಗಲಿ, ಬೆಳ್ಳಿಬಟ್ಟಲವಾಗಲಿ, ಬಾಳು ಬಂಗಾರವಾಗಲಿ ಎಂದು ಶುಭ ಹಾರೈಸಿ ತಮ್ಮ ಗುಡಾರಗಳಿಗೆ ಹಿಂದಿರುಗುತ್ತಾರೆ. ಈ ರೀತಿಯಾಗಿ ಭಿಕ್ಷಾಟನೆ ಮತ್ತು ಕಥೆಗಳನ್ನು ಹೇಳುವುದರ ಮುಖಾಂತರ ತಮ್ಮ ಕುಟುಂಬದ ಆರ್ಥಿಕ ಬದುಕನ್ನು ಸುಧಾರಿಸಿಕೊಳ್ಳುವ ಪ್ರಯತ್ನ ಮಾಡುತ್ತಿರುತ್ತಾರೆ.

**ಬೇಟೆ**

ಬೇಟೆ ಆದಿಮಾನವನ ಕಾಲದಿಂದಲೂ ಬೆಳೆದುಕೊಂಡು ಬಂದ ಕಸುಬಾಗಿದೆ. ಬೇಟೆ ಪ್ರಮುಖವಾಗಿ ಐದು ಹಂತಗಳಲ್ಲಿ ಉಳಿದುಕೊಂಡು ಬಂದಿರುವುದನ್ನು ಗುರುತಿಸಬಹುದು. ೧. ಆಹಾರೋತ್ಪಾದನೆ ೨. ಪೈರು ಹಾಗು ದನಕರುಗಳ ರಕ್ಷಣೆ ೩. ಚರ್ಮ, ಕೊಂಬು ಇತ್ಯಾದಿ ವಸ್ತುಗಳ ಸಂಗ್ರಹಣೆ ೪. ಪ್ರತಿಷ್ಠೆ ಕೀರ್ತಿಯನ್ನು ಮೆರೆಯಲು ೫. ಆಚರಣೆಗಳಲ್ಲಿ ಬೇಟೆ ತನ್ನ ಅಸ್ತಿತ್ವವನ್ನು ಉಳಿಸಿಕೊಂಡು ಬಂದಿವೆ.[೩] ಬೇಟೆಯಾಡುವುದು ಒಂದು ವರ್ಗಕ್ಕೆ ಮನೋರಂಜನೆಯಾದರೆ ಇನ್ನೊಂದು ವರ್ಗಕ್ಕೆ ಅದು ವೃತ್ತಿಯಾಗಿ ಬೆಳೆದುಕೊಂಡು ಬಂದಿದೆ. ಹಿಂದೆ ಮಾನವನು ಕಾಡಿನಲ್ಲಿ ವಾಸ ಮಾಡುತ್ತಿರುವಾಗ ತನ್ನ ಹಸಿವೆಯನ್ನು ನೀಗಿಸಿಕೊಳ್ಳಲು ಎರಡು ಮುಖ್ಯ ವೃತ್ತಿಗಳನ್ನು ಕೈಗೊಂಡನು. ಒಂದನೆಯದು ಗಡ್ಡೆಗೆಣಸುಗಳನ್ನು ಅಗೆದು ತಿನ್ನುವುದು. ಇನ್ನೊಂದು ಬೇಟೆಯಾಡಿ ಪ್ರಾಣಿಗಳ ಮಾಂಸವನ್ನು ಸಂಗ್ರಹಿಸಿ ತಿನ್ನುವುದು.[೪] ಹಂತಹಂತವಾಗಿ ಮಾನವನ ಬೌದ್ಧಿಕ ಮಟ್ಟ ವಿಕಾಸನ ಹೊಂದಿದಂತೆ ಬೇಟೆ ಸಾಮೂಹಿಕ ವೃತ್ತಿಯಾಗಿ ಬೆಳೆದುಕೊಂಡು ಬಂದಿತು. ಹಗಲುವೇಷಗಾರರು ಇದಕ್ಕೆ ಹೊರತಾಗಿಲ್ಲ. ವೇಷಗಾರಿಕೆಯೂ ಪ್ರಧಾನ ವೃತ್ತಿಯಾದರೆ ಬೇಟೆ ಉಪವೃತ್ತಿಯಾಗಿ ಇವರಿಗೆ ಬೆಳೆದುಕೊಂಡು ಬಂದಿದೆ. ಬೇಟೆಯಾಡುವುದು ತುಂಬಾ ಅಪಾಯಕಾರಿಯಾದದ್ದು. ಅದರಲ್ಲಿ ಸಂಪೂರ್ಣವಾಗಿ ಪಳಗಿದವರಾಗಿರಬೇಕು. ಹಗಲುವೇಷಗಾರರು ಬೇಟೆಯಲ್ಲಿ ನಿಪುಣರಾಗಿದ್ದಾರೆ. ಇವರು ಬೇಟೆಯನ್ನು ಮಳೆಗಾಲದಲ್ಲಿ ಹೆಚ್ಚಾಗಿ ಕೈಗೊಳ್ಳುತ್ತಾರೆ. ಏಕೆಂದರೆ ಮಳೆಗಾಲದಲ್ಲಿ ವೇಷಪ್ರದರ್ಶನ ಮಾಡಲು ಬರುವುದಿಲ್ಲ. ಕಾರಣ ಆ ಸಂದರ್ಭವನ್ನೆಲ್ಲಾ ಬೇಟೆಗಾಗಿ ಉಪಯೋಗಿಸಿಕೊಳ್ಳುತ್ತಾರೆ. ಹಗಲುವೇಷಗಾರರು ಎಲ್ಲ ರೀತಿಯ ಪ್ರಾಣಿ-ಪಕ್ಷಿಗಳ ಬೇಟೆಯನ್ನಾಡುತ್ತಾರೆ. ಬೇಟೆ ಎಂದರೆ ಈ ಜನತೆಗೆ ತುಂಬಾ ಇಷ್ಟ. ತಮ್ಮ ಆಹಾರ ಉತ್ಪಾದನೆಗೆ ಬೇಟೆಯನ್ನು ಒಂದು ಉಪವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇವರಿಗೆ ಮಾಂಸದ ಊಟ ಇಲ್ಲದಿದ್ದರೆ ಸಂತೃಪ್ತಿಕರ ಊಟವಾಗುವುದಿಲ್ಲಾವೆಂದು ಹೇಳುತ್ತಾರೆ. ಇವರು ಬೇಟೆಯನ್ನು ವ್ಯಾಪಾರ ದೃಷ್ಟಿಯಿಂದ

ಕೈಗೊಳ್ಳುವುದಿಲ್ಲ. ಕೆಲವೊಂದು ವಿಶೇಷ ಸಂದರ್ಭದಲ್ಲಿ ಬೇಟೆ ಹೆಚ್ಚು ಸಿಕ್ಕಾಗ ವ್ಯಾಪಾರಕ್ಕಾಗಿ ಬಳಸಿಕೊಳ್ಳುತ್ತಾರೆ. ಹೆಚ್ಚಾಗಿ ಬೇಟೆಯನ್ನು ತಮ್ಮ ಜೀವನ ನಿರ್ವಹಣೆಗಾಗಿ ಬಳಸಿಕೊಳ್ಳುತ್ತಾರೆ.

### ಕೌಜು ಬೇಟೆ

ಬೇಟೆಯಲ್ಲಿ ಕೌಜುಗಪಕ್ಷಿ ವಿಶೇಷವಾಗಿ ಬೇಟೆಗಾರನಿಗೆ ತನ್ನ ಪರಿವಾರವನ್ನು ಹಿಡಿದುಕೊಡಲು ನೆರವಾಗುತ್ತದೆ. 'ಮುಳ್ಳನ್ನು ಮುಳ್ಳಿನಿಂದಲೆ ತೆಗೆ' ಎನ್ನುವ ಜನಪದರ ಮಾತುಗಳಂತೆ ಕೌಜುಗಗಳನ್ನು ಕೌಜುಗಳಿಂದಲೆ ಹಿಡಿಯುವ ವಿಧಾನವಾಗಿದೆ.[೫] ಹಗಲುವೇಷಗಾರರು ಕೌಜುಗ ಬೇಟೆಗೆ ಕೌಜುಗವನ್ನು ತಂತ್ರವನ್ನಾಗಿ ಬಳಸುತ್ತಾರೆ. ಬೇಟೆಗೆ ಪಳಗಿಸಿದ ಕೌಜುಗ ಪಕ್ಷಿಯನ್ನು ಪಂಜರದಲ್ಲಿಟ್ಟು ಪಂಜರವು ಕಾಡಿನ ಕೌಜುಗಗಳಿಗೆ ಕಾಣದಂತೆ ಅದಕ್ಕೆ ಬಟ್ಟೆಯ ಮೆಲು ಹೊದಿಕೆಯನ್ನು ಹಾಕಲಾಗುತ್ತದೆ. ಅವರ ಸುತ್ತಲು ಬಲೆಯ ವ್ಯೂಹವನ್ನು ರಚಿಸುತ್ತಾರೆ.[೬] ನಂತರ ಮರೆಯಾಗಿ ಕಾಡಿನಲ್ಲಿ ಅವಿತು ಕುಳಿತುಕೊಳ್ಳುತ್ತಾರೆ. ಆಗ ಪಂಜರದಲ್ಲಿದ್ದ ಕೌಜುಗ ಯಥಾಪ್ರಕಾರವಾಗಿ ಕೂಗುತ್ತದೆ. ಈ ಕೌಜುಗದ ನಿಜ ಧ್ವನಿಯನ್ನು ಆಲಿಸಿದ ಕಾಡಿನ ಕೌಜುಗಗಳ ಹಿಂಡು ರಭಸದಿಂದ ನುಗ್ಗುತ್ತವೆ. ಮೋಸ ಅರಿಯದೆ ಪಂಜರದ ಸುತ್ತ ರಚಿಸಿದ ವ್ಯೂಹದಲ್ಲಿ ಬಂಧಿಯಾಗುತ್ತವೆ.[೭] ನಂತರ ಮರೆಯಲ್ಲಿ ಕುಳಿತ ಬೇಟೆಗಾರ ಅವುಗಳನ್ನು ಹಿಡಿದುಕೊಳ್ಳುತ್ತಾನೆ. ಈ ರೀತಿ ಹಗಲುವೇಷಗಾರರು ಕೌಜುಗ ಬೇಟೆಯನ್ನಾಡುತ್ತಾರೆ.

### ಹಂದಿ ಬೇಟೆ

ಹಗಲುವೇಷಗಾರರು ಹಂದಿಗೆ 'ಮೆಕ್ಕಂ' ಬೇಟೆ ಎಂದು ಕರೆಯುತ್ತಾರೆ. ಈ ಬೇಟೆಗೆ ಒಂದು ಸಾಮೂಹಿಕ ತಂಡವು ಅಗತ್ಯವಾಗಿದೆ. ಈ ಬೇಟೆಗೆ ಹಗಲುವೇಷಗಾರರು ಪ್ರಮುಖವಾದ ಆಯುಧಗಳನ್ನು ಬಳಸುತ್ತಾರೆ. "ಲೋಹದಿಂದ ಮಾಡಿದ ಖಡ್ಗ, ಈಟಿ, ತಂತಿಬಲೆ, ಭರ್ಚಿ, ಹಗ್ಗದ ಬಲೆ, ಕೋವಿ ಮುಂತಾದವುಗಳನ್ನು ಬಳಸುತ್ತಾರೆ.[೮] ರೈತರ ಬೆಳೆಯನ್ನು ಹಂದಿಗಳು ಹಾಳುಮಾಡುತ್ತಿರುವಾಗ ರೈತರು ಹಂದಿ ಬೇಟೆಗೆ ಇವರನ್ನು ಆಹ್ವಾನಿಸುತ್ತಾರೆ. ಆಗ ಹಗಲುವೇಷಗಾರರು ರೈತರ ಬೆಳೆಗೆ ರಕ್ಷಣೆ ಕೊಡಲು ಹಂದಿ ಬೇಟೆಗೆ ಹೋಗುತ್ತಾರೆ. ಹಂದಿ ಬೇಟೆಯಲ್ಲಿ ನಾಯಿಗಳ ಪಾತ್ರ ಪ್ರಮುಖವಾದುದಾಗಿದೆ. ಬೇಟೆ ನಾಯಿಗಳೆಂದೇ ಕರೆಸಿಕೊಳ್ಳುವ ನಾಯಿಗಳು ಬೇಟೆಯಲ್ಲಿ ಪ್ರಾಣಿಗಳನ್ನು ಪತ್ತೆಹಚ್ಚಲು ಪ್ರಮುಖ ಪಾತ್ರವಹಿಸುತ್ತವೆ.[೯] ಹಗಲುವೇಷಗಾರರು ನಾಯಿಗಳನ್ನು ಕರೆದುಕೊಂಡು ಬಲೆ, ಭರ್ಚಿ, ಆಯುಧಗಳನ್ನು ತೆಗೆದುಕೊಂಡು ಹೋಗಿ ರೈತರ ಹೊಲದ ಗಡಿಯಲ್ಲಿ ಬಲೆಯನ್ನು ಬಿಟ್ಟು ಹಂದಿಯನ್ನು ಪತ್ತೆ ಹಚ್ಚಲು ನಾಯಿಗಳನ್ನು ಬಿಡುತ್ತಾರೆ. ನಾಯಿಗಳು ಹಂದಿಯ ಹೆಜ್ಜೆಯನ್ನು ಪತ್ತೆ ಹಚ್ಚಿ ಹಂದಿಯನ್ನು ಎಬ್ಬಿಸುತ್ತವೆ. ಆಗ ಬೇಟೆಗಾರರು ಹಂದಿಯನ್ನು [illegible] ಹಂದಿಯು ಬಲೆಯಲ್ಲಿ ಸಿಕ್ಕು ಬಿದ್ದಾಗ ಎಲ್ಲರು ಭರ್ಚಿಗಳಿಂದ ತಿವಿದು ಕೊಲ್ಲುತ್ತಾರೆ.[೧೦] ಹಂದಿಬೇಟೆಯನ್ನು

ಯಾವುದೇ ಕಾರಣಕ್ಕೆ ತಿನ್ನುವುದಿಲ್ಲಾ ಹಂದಿಯನ್ನು ಹರಿಯ ಸ್ವರೂಪವೆಂದು ಭಾವಿಸಿದ್ದಾರೆ. ರೈತರ ಬೆಳೆಗೆ ರಕ್ಷಣೆ ಕೊಡಲು ಈ ಬೇಟೆಯಾಡುತ್ತೇವೆ ಎಂದು ಹೇಳುತ್ತಾರೆ.

**ಆಮೆ ಬೇಟೆ**

ಹಗಲುವೇಷಗಾರರು ಆಮೆಯನ್ನು 'ಕುರುಂಗಾಡು' ಎಂದು ಕರೆಯುತ್ತಾರೆ. ಆಮೆಯ ಬೇಟೆಯನ್ನು ಮಳೆಗಾಲದಲ್ಲಿ ಕೈಗೊಳ್ಳುತ್ತಾರೆ. ಮಳೆಗಾಲದಲ್ಲಿ ಬಾವಿ, ಹಳ್ಳತೆಗ್ಗುಗಳು ನೀರಿನಿಂದ ತುಂಬಿಕೊಂಡಿರುತ್ತವೆ. ಈ ಬೇಟೆಗೆ ಇಬ್ಬರಿಂದ ಮೂರು ಜನ ಸೇರುತ್ತಾರೆ. ನೀರಿನಲ್ಲಿ ಗಲಭೆ ಮಾಡುತ್ತಾ ನೀರಿನ ದಡವನ್ನು ಸೂಸುತ್ತಾರೆ. ಆಗ ದಡದಲ್ಲಿ ಕುಳಿತುಕೊಂಡ ಆಮೆ ಮೇಲೆ ಬರುತ್ತದೆ. ಆಗ ಹಿಡಿದುಕೊಳ್ಳುತ್ತಾರೆ. ಮತ್ತೊಂದು ವಿಧ ಎಂದರೆ ನೀರಿನಲ್ಲಿ ಬಲೆಯನ್ನು ಬೀಸಿ ಇಬ್ಬರು ಬಲೆಯನ್ನು ಹಿಡಿದುಕೊಳ್ಳುತ್ತಾರೆ. ಒಬ್ಬನು ನೀರನ್ನು ಗಲಭೆಗೊಳಿಸುತ್ತ ನೀರಿನ ದಡವನ್ನು ತಡಕಾಡುತ್ತಾ ಬರುತ್ತಾನೆ. ಆಗ ದಡದಲ್ಲಿದ್ದ ಆಮೆಯು ತಪ್ಪಿಸಿಕೊಳ್ಳಲು ಹೋಗುತ್ತಿರುವಂತೆಯೇ ನೀರಿನಲ್ಲಿ ಹಾಕಿದ ಬಲೆಗೆ ಬಂದು ಸಿಕ್ಕಿಕೊಳ್ಳುತ್ತದೆ ಆಗ ಅದನ್ನು ಹಿಡಿದುಕೊಳ್ಳುತ್ತಾರೆ.

**ಅಳಿಲು ಬೇಟೆ**

ಇದನ್ನು ಹಗಲುವೇಷಗಾರರು 'ತೊಡ್ಸಿಗಾಡು' ಎಂದು ಕರೆಯುತ್ತಾರೆ. ಅಳಿಲು ಮರದಲ್ಲಿ ಕುಳಿತಾಗ ಮರದ ಬುಡದ ಸುತ್ತ ಬಲೆಯನ್ನು ಹಾಕುತ್ತಾರೆ. ಒಬ್ಬನು ಗಿಡದ ಮರೆಯಲ್ಲಿ ಕುಳಿತುಕೊಳ್ಳುತ್ತಾನೆ ಮತ್ತೊಬ್ಬನು ಗಿಡದಲ್ಲಿ ಕುಳಿತ ಅಳಿಲನ್ನು ಕೆಳಗಿಳಿಯುವಂತೆ ಕಲ್ಲಿನಿಂದ ಹೊಡೆಯುತ್ತಾನೆ. ಮರದ ಮೇಲಿಂದ ಕೆಳಗಿಳಿದು ತಪ್ಪಿಸಿಕೊಳ್ಳಲು ಬರುತ್ತದೆ. ಮರದ ಬುಡದಲ್ಲಿ ಹಾಕಿದ ಬಲೆಗೆ ಸಿಕ್ಕಿಕೊಳ್ಳುತ್ತದೆ.

**ಮುಳ್ಳಂದಿ ಬೇಟೆ**

ಇದನ್ನು 'ಏದು' ಎಂದು ಕರೆಯುತ್ತಾರೆ. ಇದನ್ನು ಹೆಚ್ಚಾಗಿ ರಾತ್ರಿ ಹೊತ್ತು ಶ್ವಾನದಳದ ಸಹಾಯದೊಂದಿಗೆ ಆಡುತ್ತಾರೆ. ಈ ಬೇಟೆ ತುಂಬಾ ಅಪಾಯಕಾರಿಯಾದದ್ದು ಒಮ್ಮೆ ಇದು ತನ್ನ ಪ್ರಾಣ ರಕ್ಷಣೆಗೆ ಮೈಯನ್ನು ಸಡಿಲಗೊಳಿಸಿದರೆ ಮುಳ್ಳು ಸುಮಾರು ಆರು, ಏಳು, ಅಡಿ ಚಿಮ್ಮುತ್ತವೆ. ಈ ಬೇಟೆಯನ್ನು ಸಾಮೂಹಿಕ ತಂಡದೊಂದಿಗೆ ಆಡುತ್ತಾರೆ. ಈ ಬೇಟೆಗಳಲ್ಲದೆ ಹಗಲುವೇಷಗಾರರು ಏಡಿ, ಮೀನು, ಜಿಂಕೆ, ಮೊಲ, ಉಡ, ಪುನಗಬೆಕ್ಕು, ಚೀರುನಾಯಿ, ಮುಂಗೂಸಿ ಮುಂತಾದ ಬೇಟೆಗಳನ್ನು ತಮ್ಮ ಉಪಯುಕ್ತವಾದ ತಂತ್ರಗಳನ್ನು ಬಳಸಿಕೊಂಡು ಬೇಟೆ ಆಡುತ್ತಾರೆ. ಇತ್ತೀಚೆಗೆ ಸರಕಾರವು ವನ್ಯಜೀವಿಗಳ ಸಂರಕ್ಷಣಾ ಕಾಯಿದೆಯನ್ನು ಜಾರಿಗೆ ತಂದು ಬೇಟೆಯಾಡಲು ನಿಷೇಧ ಹೇರಿದ್ದಾರೆ. ಇದರಿಂದ ಹಗಲುವೇಷಗಾರರು [illegible]

**ಪಶುಪಾಲನೆ**

ಪಶುಪಾಲನೆಯು ಪ್ರಾಚೀನ ಸಂದರ್ಭದಿಂದಲೂ ಒಂದು ಪ್ರಮುಖ ವೃತ್ತಿಯಾಗಿ ಬೆಳೆದುಕೊಂಡು ಬಂತು. ಹಗಲುವೇಷಗಾರರು ಇದಕ್ಕೆ ಹೊರತಾಗಿಲ್ಲ. ಮಾನವನ ದೈಹಿಕ ಹಾಗೂ ಬೌದ್ಧಿಕ ವಿಕಾಸದಲ್ಲಿ ಅನಿವಾರ್ಯವಾಗಿದ್ದ ಬೇಟೆ ಮಾನವನ ಸಾಂಸ್ಕೃತಿಕ ಇತಿಹಾಸದ ಬೆಳವಣಿಗೆಯ ಮುಂದಿನ ಹಂತಗಳಲ್ಲಿ ಸಾರ್ವತ್ರಿಕವಾಗಿ ಅನಿವಾರ್ಯವಾಗಲಿಲ್ಲ. ಪರಿಣಾಮವಾಗಿ ಪ್ರಾಣಿಗಳನ್ನು ಸಾಕುವ ಕೆಲಸಕಾರ್ಯದಲ್ಲಿ ತೊಡಗಿ ಅದರಿಂದ ತಮಗೆ ಬೇಕಾದ ಮಾಂಸವನ್ನು ಪಡೆಯಲು ಪ್ರಾರಂಭಿಸಿದರು.[೧೪] ಹಗಲುವೇಷಗಾರರು ತಮ್ಮ ಆರ್ಥಿಕ ಬದುಕಿನ ನಿರ್ವಹಣೆಗೆ ಪಶುಪಾಲನೆಯನ್ನು ಅವಲಂಬಿಸಿದ್ದಾರೆ. ಪಶುಪಾಲನೆ ಇವರ ಆರ್ಥಿಕ ಸ್ಥಿತಿಯನ್ನು ತುಂಬುವಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಹಗಲುವೇಷಗಾರರು ವೇಷ ಪ್ರದರ್ಶನದ ಸಂದರ್ಭದಲ್ಲಿ ಊರಲ್ಲಿ ಶ್ರೀಮಂತರು ದಾನರೂಪದಲ್ಲಿ ಕೊಟ್ಟ ಕುರಿ, ಮೇಕೆ, ದನ ಮೊದಲಾದವುಗಳನ್ನು ತಂದು, ಹಿಂದೆ ಮಾರಿಕೊಳ್ಳುತ್ತಿದ್ದರು. ಆದರೆ ಇತ್ತೀಚೆಗೆ ಅವುಗಳನ್ನು ಒಂದಕ್ಕೊಂದು ಬೆಳೆಸಿಕೊಂಡು ತಮ್ಮ ಕಷ್ಟದ ಸಂದರ್ಭದಲ್ಲಿ ಮಾರಿಕೊಂಡು ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಾರೆ. ಈ ಕುರಿತು ಹಗಲುವೇಷಗಾರರೊಬ್ಬರನ್ನು ಸಂದರ್ಶಿಸಿದಾಗ ಅವರು ಹೇಳಿದ್ದು ಹೀಗೆ,

"ಸ್ವಾಮಿ ಹಿಂದೆ ನಮಗೆ ಊರಿನ ಗೌಡರು ಕೊಟ್ಟ ಆಡು, ಮೇಕೆ, ದನಗಳನ್ನು ಮಾರಿಕೊಳ್ಳುತ್ತಿದ್ದೆವು. ಆದರೆ ಇತ್ತೀಚೆಗೆ ನಾವು ಅವುಗಳನ್ನು ಜೋಪಾನ ಮಾಡಿ ಒಂದಕ್ಕೊಂದು ಅವುಗಳ ಬೆಳವಣಿಗೆ ಹೆಚ್ಚಾಗುವಂತೆ ಕಾಳಜಿ ವಹಿಸುತ್ತೇವೆ. ನಮ್ಮ ಕಷ್ಟದ ಸಂದರ್ಭದಲ್ಲಿ ಮಾರಿಕೊಂಡು ಜೀವನ ಸಾಗಿಸುತ್ತೇವೆ. ನಾನು ಈ ಊರಿನ ಕುರುಬರು ಕೊಟ್ಟ ಒಂದು ಕುರಿಯಿಂದ ಇಂದು ೨೫ ಕುರಿಗಳನ್ನು ಹೊಂದಿದ್ದೇನೆ ಎಂದು ಹೇಳುತ್ತಾನೆ. ಇವುಗಳಿಂದ ಗೊಬ್ಬರ ಉಂಟು, ಹಾಲು, ಮೊಸರು, ತುಪ್ಪ ಸಿಗುತ್ತದೆ. ನಮ್ಮ ಆಹಾರಕ್ಕೆ ಹಾಲು, ಮೊಸರು ಅವಶ್ಯಕವಾಗಿವೆ." ಅವುಗಳನ್ನು ಬೆಳೆಸಿದರೆ ಮುಂದೆ ನಮಗೆ ಹೆಚ್ಚಿನ ಹಣ ಸಿಗುತ್ತದೆ ಎನ್ನುವ ಆಸೆಯನ್ನು ವ್ಯಕ್ತಪಡಿಸುತ್ತಾರೆ.[೧೫] ಪಶುಪಾಲನೆಯಿಂದ ಈ ಜನತೆಯ ಆರ್ಥಿಕ ಸ್ಥಿತಿ ಸ್ವಲ್ಪಮಟ್ಟಿಗೆ ಸುಧಾರಿಸುತ್ತಿದೆ ಎಂದು ಹೇಳಬಹುದು. ದನಕರಗಳನ್ನು ತಾವು ಊರಿಂದ ಊರಿಗೆ ಅಲೆದಾಡುವಾಗ ತಮ್ಮ ಸಾಮಾನುಗಳನ್ನು ಅವುಗಳ ಮೇಲೆ ಏರಿಕೊಂಡು ಹೋಗಲು ಬಳಸುತ್ತಿದ್ದರು. ಆದರೆ ಇತ್ತೀಚೆಗೆ ಸಾರಿಗೆ ವ್ಯವಸ್ಥೆ ಅನುಕೂಲಕರವಾಗಿರುವುದರಿಂದ ಊರಿಂದ ಊರಿಗೆ ಅಲೆದಾಡಲು ಯಾವುದೇ ಸಮಸ್ಯೆ ಇಲ್ಲ ಎಂದು ಹೇಳಬಹುದು. ದನಗಳಿಂದ, ಕುರಿಗಳಿಂದ ದೊರೆತ ಸಗಣಿಯನ್ನು ಇತರರಿಗೆ ಮಾರುತ್ತಾರೆ. ಈ ಜನತೆ ಭೂಮಿಯನ್ನು ಹೊಂದಿರುವುದು ತುಂಬಾ ಕಡಿಮೆ. ಏಕೆಂದರೆ ದಾನವಾಗಿ ಕೊಟ್ಟ ಭೂಮಿಯನ್ನು ಮಾರಿಕೊಂಡು ಬಿಡುತ್ತಾರೆ. ಇಲ್ಲವೆ ಸರಿಯಾದ ಭೂಮಿಯ ಒಡೆತನ ಹೊಂದದಿರುವುದರಿಂದ [illegible] ದಾನವಾಗಿ [illegible] ಈ [illegible] [illegible] ಅವರ ಕಲೆಯನ್ನು ಮೆಚ್ಚಿ, ಶ್ರೀಮಂತರು ಭೂಮಿಯನ್ನು ಕೊಟ್ಟಿರುವುದಕ್ಕೆ ನಿದರ್ಶನಗಳಿವೆ. ಶಿವಪ್ಪ

ಎನ್ನುವ ವೇಷಗಾರನಿಗೆ ಆತನ ಕಲೆಯನ್ನು ಮೆಚ್ಚಿ ಊರಿನ ಗೌಡನಾದ ನರಸಪ್ಪಗೌಡ ೯ ಎಕರೆ ಭೂಮಿಯನ್ನು ದಾನರೂಪದಲ್ಲಿ ನೀಡಿದನು. ಶಿವಲಿಂಗ ಎನ್ನುವ ವೇಷಗಾರನಿಗೆ ಯಂಕಣ್ಣವಲ್ಲದ್ ೫-೧೨ ಗುಂಟೆ ಭೂಮಿಯನ್ನು ದಾನರೂಪದಲ್ಲಿ ನೀಡಿದ್ದನು. ಆದರೆ ಹೆಚ್ಚಿನವರು ತಮಗೆ ದಾನದ ರೂಪದಲ್ಲಿ ಸಿಕ್ಕಿದ ಭೂಮಿಯನ್ನು ಬಳಸಿಕೊಂಡಿಲ್ಲ. ಕೃಷಿಯಲ್ಲಿ ಹೆಚ್ಚಿನ ಆಸಕ್ತಿ ಇಲ್ಲದಿರುವುದು ಅಥವಾ ಬಂಡವಾಳದ ಕೊರತೆ ಅವರನ್ನು ಮಾರುವಂತೆ ಮಾಡಿತು. ಇತ್ತೀಚೆಗೆ ಪಶುಪಾಲನೆ ಲಾಭದಾಯಕ ವೃತ್ತಿಯಾಗಿ ಇವರಿಗೆ ಕಂಡಿದೆ.

**ಸಣ್ಣ ಕೈಗಾರಿಕೆ**

ಹಗಲುವೇಷಗಾರರು ಹಿಂದೆ ತಮ್ಮ ಜೀವನ ನಿರ್ವಹಣೆಗೆ ಮುಖ್ಯವಾಗಿ ಕಲೆಯನ್ನು ನಂಬಿಕೊಂಡಿದ್ದರು. ಇತ್ತೀಚೆಗೆ ಆಧುನಿಕ ಮಾಧ್ಯಮಗಳು ಹುಟ್ಟಿಕೊಂಡು ಇವರ ಕಲೆಗೆ ಪ್ರೋತ್ಸಾಹ ಕಡಿಮೆಯಾಗಿ ಊರಲ್ಲಿ ಕೂಡ ದಾನವನ್ನು ನೀಡುವ ಜನತೆ ಆಸಕ್ತಿ ಕಳೆದುಕೊಂಡಿದ್ದಾರೆ. ಅಲ್ಲದೆ ಹಗಲುವೇಷಗಾರರ ಕುಟುಂಬ ನಿಯಂತ್ರಣವಿಲ್ಲದೆ, ಹೆಚ್ಚಿನ ಮಕ್ಕಳನ್ನು ಪಡೆಯುವುದು ಮತ್ತೊಂದು ದೊಡ್ಡ ಸಮಸ್ಯೆಯಾಗಿದೆ. ಜನಸಂಖ್ಯೆ ಬೆಳೆದಂತೆ ಆರ್ಥಿಕ ಬದುಕು ತುಂಬಾ ಜಟಿಲಗೊಂಡಿದೆ. ಅದಕ್ಕಾಗಿ ಇವರು ತಮ್ಮ ಜೀವನ ನಿರ್ವಹಣೆಗೆ ಆಧುನಿಕತೆಯ ವ್ಯಾಮೋಹಕ್ಕೆ ಒಳಗಾಗಿ ಪರ್ಯಾಯ ವೃತ್ತಿಗಳನ್ನು ಕೈಗೊಂಡಿದ್ದಾರೆ. ಅಂತಹ ಪರ್ಯಾಯ ವೃತ್ತಿಗಳಲ್ಲಿ ವ್ಯಾಪಾರ ಮಾಡುವುದು, ಸ್ಟಿಲ್‌ಪಾತ್ರೆಗಳ ಮಾರಾಟ, ರಬ್ಬರ್ ಕೊಡಗಳ ಮಾರಾಟ ಮುಂತಾದವು ಮುಖ್ಯವಾದುದಾಗಿದೆ. ಗುಂತಕಲ್, ಕರ್ನೂಲ್, ಗಂಗಾವತಿ, ಹೈದ್ರಾಬಾದ್, ಕರಿಂನಗರ, ಮಹಿಬೂಬನಗರ ಮೊದಲಾದ ಪ್ರದೇಶಗಳಲ್ಲಿ ಈ ಸಮುದಾಯದ ಜನರೆ ರಬ್ಬರ್ ಕೊಡ ತಯಾರಿಕೆ ಹಾಗೂ ಸಿಲ್ವರ್ ಪಾತ್ರೆಗಳ ತಯಾರಿಕೆ ಯಂತ್ರಗಳನ್ನು ಹಾಕಿದ್ದಾರೆ. ಇವರು ತಯಾರು ಮಾಡಿದ ರಬ್ಬರ್ ಕೊಡಗಳನ್ನು ತಮ್ಮ ಸಮುದಾಯದವರಿಗೆ ಕೊಡುತ್ತಾರೆ. ಈ ಸಮುದಾಯದ ನಿರುದ್ಯೋಗಿ ಹೆಣ್ಣುಮಕ್ಕಳು, ಗಂಡುಮಕ್ಕಳು ಕೊಡಗಳನ್ನು ತೆಗೆದುಕೊಂಡು ಒಂದು ಕಟ್ಟಿಗೆಗೆ ಹಿಂದೆ ಮುಂದೆ ಕಟ್ಟಿಕೊಂಡು ಪಟ್ಟಣ, ಹಳ್ಳಿಗಳಿಗೆ ಹೋಗಿ ಮಾರಾಟ ಮಾಡುತ್ತಾರೆ. ಹೊಡೆದ ರಬ್ಬರ್ ಕೊಡಗಳನ್ನು ಕಡಿಮೆ ಬೆಲೆಯಲ್ಲಿ ತರುತ್ತಾರೆ. ಹೀಗೆ ವ್ಯಾಪಾರ ಮಾಡಿಕೊಂಡು ಬಂದು ಕೈಗಾರಿಕಾ ಮಾಲೀಕರಿಗೆ ಹಳೆಯ ಕೊಡಗಳನ್ನು ಕೊಟ್ಟು ಮೊದಲು ಕೊಟ್ಟ ದರದಲ್ಲಿ ಮುರಿದು ಉಳಿದ ಹಣವನ್ನು ವ್ಯಾಪಾರ ಮುಗಿದ ಮೇಲೆ ತಂದು ಕೊಡುತ್ತಾರೆ. ಹೀಗೆ ಈ ಸಮುದಾಯದ ಜನ ಬಂಡವಾಳ ಇಲ್ಲದೆ ಇರುವ ಉದ್ಯೋಗಗಳನ್ನು ಇಷ್ಟಪಡುತ್ತಾರೆ. ಆಂಧ್ರದ ಗಡಿಭಾಗಗಳಲ್ಲಿ ಈ ರೀತಿಯ ಉದ್ಯೋಗವೇ ಹೆಚ್ಚು ಕಂಡು ಬರುತ್ತದೆ.

**ಗೃಹಕೈಗಾರಿಕೆಗಳು**

ಹಗಲುವೇಷಗಾರರು ಗೃಹಕೈಗಾರಿಕೆಗಳನ್ನು [illegible]

ಎಣೆಯುವುದು, ವೇಷಭೂಷಣ ಪರಿಕರಗಳನ್ನು ತಯಾರಿಸುವುದು, ಭಿಕ್ಷಾಟನೆಯ ಪರಿಕರಗಳನ್ನು ತಯಾರಿಸುವುದು, ಬೇಟೆಯ ಪರಿಕರಗಳನ್ನು ತಯಾರಿಸಿಕೊಳ್ಳುವುದು, ಕೌದಿ ಹೊಲಿಯುವುದು ಮುಂತಾದ ಕೆಲಸಗಳನ್ನು ಇವರು ಮಾಡುತ್ತಾರೆ.

**ಚಾಪೆ ಹೆಣೆಯುವುದು**

ಇವರ ಕೈ ಕೆಲಸದಲ್ಲಿ ಪ್ರಮುಖ ಕಸುಬು ಚಾಪೆ ಹೆಣೆಯುವುದು. ಚಾಪೆ ಹೆಣೆಯುವುದು ಮುಖ್ಯವಾಗಿ ಹೆಣ್ಣು ಮಕ್ಕಳು ಬಿಡುವಿನ ವೇಳೆಯಲ್ಲಿ ನಾಲ್ಕೈದು ಜನ ಸೇರಿಕೊಂಡು ಅಡವಿಗೆ ಹೋಗಿ ಈಚಲ ರಂಬೆಗಳನ್ನು ತೆಗೆದುಕೊಂಡು ಬರುತ್ತಾರೆ. ಈಚಲ ರಂಬೆಗಳನ್ನು ತಂದ ನಂತರ ಅದನ್ನು ಎಲೆ ಎಲೆಯ ರೂಪದಲ್ಲಿ ಸುಲಿದು ಬಿಸಿಲಿಗೆ ಒಣಗಿಸುತ್ತಾರೆ. ನಂತರ ಎಲ್ಲವುಗಳನ್ನು ಜೋಡಿಸಿಕೊಂಡು ಒಂದು ದಾರದಿಂದ ಕಟ್ಟಿಡುತ್ತಾರೆ. ನಂತರ ಒಂದೊಂದು ಪರಕೆಯನ್ನು ತೆಗೆದುಕೊಂಡು ಪರಕೆಗೆ ಇನ್ನೊಂದು ಪರಕೆಯನ್ನು ಜೋಡಿಸಿ ಹೆಣ್ಣು ಮಕ್ಕಳು ಹೆಣೆಯುತ್ತಾರೆ. ಊರಲ್ಲಿ ಭಿಕ್ಷೆ ಬೇಡಲು ಹೋದಾಗ ಜೋಳಿಗೆಯಲ್ಲಿ ಪರಕೆಯ ಪೆಂಡೆಯನ್ನು ಹಾಕಿಕೊಂಡು ಹಾಗೆ ಒಂದೊಂದು ಪರಕೆಯನ್ನು ತೆಗೆದು ಹೆಣೆಯುತ್ತಾ ಭಿಕ್ಷೆ ಬೇಡಿಕೊಂಡು ಬರುತ್ತಾರೆ. ಸುಮಾರು ಮೂವತ್ತು ಪಟ್ಟಿಯಾದ ನಂತರ ಒಂದೊಂದು ಪಟ್ಟಿಯನ್ನು ಜೋಡಿಸಿ ಒಂದು ಚಾಪೆಯನ್ನು ಮಾಡುತ್ತಾರೆ. ನಂತರ ಊರೊಳಗೆ ಹೋಗಿ ತಮಗ ಸರಿ ಬಂದ ಬೆಲೆಗೆ ಮಾರುತ್ತಾರೆ. ಇತ್ತೀಚೆಗೆ ಅಡವಿಯಲ್ಲಿ ಈಚಲ ಪರಕೆಗಳು ಸಿಗುವುದು ಕಡಿಮೆಯಾಗಿರುವುದರಿಂದ ಹಾಗೂ ಹೊಲದ ಮಾಲೀಕರು ಪರಕೆಗಳನ್ನು ಕಡಿಯಲು ಅವಕಾಶ ಕೊಡದಿರುವದರಿಂದಾಗಿ ಚಾಪೆ ಹೆಣೆದು ಹೊಟ್ಟೆ ತುಂಬಿಸಿಕೊಳ್ಳುವುದು ಕಷ್ಟಕರವಾಗಿದೆ. ಅಲ್ಲದೆ ಆಧುನಿಕ ರೀತಿಯ ಚಾಪೆಗಳು ಮಾರುಕಟ್ಟೆಗೆ ಪ್ರವೇಶಿಸಿದ್ದರಿಂದಾಗಿ ಇವರ ಚಾಪೆಗಳಿಗೆ ಬೆಲೆ ಇಲ್ಲದಂತಾಗಿದೆ.

**ಭಿಕ್ಷಾಟನೆಯ ಪರಿಕರಗಳ ತಯಾರಿಕೆ**

ಭಿಕ್ಷಾಟನೆಗೆ ಬೇಕಾಗುವ ಜೋಳಿಗೆಯನ್ನು ಇವರು ತಾವೆ ತಯಾರಿಸಿಕೊಳ್ಳುತ್ತಾರೆ. ಜೋಳಿಗೆಯನ್ನು ತಯಾರಿಸಲು ಊರಲ್ಲಿ ದೊರೆತ ಗಟ್ಟಿಯಾದ ಬಟ್ಟೆಗಳನ್ನು ತೆಗೆದುಕೊಂಡು ಸೂಜಿದಾರದಿಂದ ನಾಲ್ಕು ಮೂಲೆ ಚೌಕಕಾರದಲ್ಲಿರುವಂತೆ ಹೊಲಿದುಕೊಳ್ಳುತ್ತಾರೆ. ಜೋಳಿಗೆಯಲ್ಲಿ ಆಹಾರ ಸಂಗ್ರಹಣೆ ಮಾಡುವ ಜೋಳಿಗೆ ಬೇರೆ, ದವಸಧಾನ್ಯಗಳ ಜೋಳಿಗೆ ಬೇರೆ. ಹೀಗೆ ವಿಧ ವಿಧದ ಜೋಳಿಗೆಗಳನ್ನು ತಾವೆ ತಯಾರಿಸಿಕೊಳ್ಳುತ್ತಾರೆ. ಇವರು ಹೊಲಿದ ಜೋಳಿಗೆಯು ಸುಮಾರು ಇಪ್ಪತ್ತು ಸೇರು ದವಸಧಾನ್ಯಗಳ ಭಾರವನ್ನು ಹೊರುತ್ತದೆ. ಅಂತಹ ಗಟ್ಟಿಯಾದ ಜೋಳಿಗೆಯನ್ನು ಇವರು ಹೊಲಿದುಕೊಳ್ಳುತ್ತಾರೆ.

### ವೇಷ ಪರಿಕರಗಳ ತಯಾರಿಕೆ

ವಿವಿಧ ರೀತಿಯ ಕಥೆ, ಸನ್ನಿವೇಶಗಳನ್ನು ಹಾಕುವ ವೇಷಗಾರರು ತಮ್ಮ ಕಥಾ ಸನ್ನಿವೇಶಕ್ಕೆ ತಕ್ಕಂತೆ ಬೇಕಾಗುವ ಪರಿಕರಗಳನ್ನು ತಾವೆ ತಯಾರಿಸಿಕೊಳ್ಳುತ್ತಾರೆ. ಕೀರಿಟಗಳು, ಭುಜ ಕೀರಿಟಗಳು, ಕಂಠಹಾರಗಳು, ಮಣಿಕಂಠಗಳು, ಗಧೆ, ಬಣ್ಣದ ಉಡುಪು, ಆಯುಧ, ಕಾಲಿಗೆ ಕಟ್ಟುವ ಗೆಜ್ಜೆಗಳನ್ನು ಮೊದಲಾದವುಗಳನ್ನು ಸ್ವಯಂ ತಾವೇ ತಯಾರಿಸಿಕೊಳ್ಳುತ್ತಾರೆ.

ಹಿಂದಿನ ಕಾಲದಲ್ಲಿ ಬಣ್ಣಗಳು ಅಂಗಡಿಗಳಲ್ಲಿ ದೊರೆಯುತ್ತಿರಲಿಲ್ಲ. ಆಗ ಇವರ ಪೂರ್ವಿಕರು ಕೃಷ್ಣಾ, ಗೋದಾವರಿ ನದಿ ದಂಡೆಗಳಲ್ಲಿ ಬಿದ್ದ ಬಣ್ಣ ಬಣ್ಣದ ಕಲ್ಲುಗಳನ್ನು ತಂದು ನೀರಿನಲ್ಲಿ ತೇದು ಬೇಕಾದ ಬಣ್ಣವನ್ನು ಮುಖಕ್ಕೆ ಹಚ್ಚಿಕೊಳ್ಳುತ್ತಿದ್ದರು.[೬] ಕುದುರೆ ಬಾಲದ ಕೂದಲಿನಿಂದ ಗಡ್ಡ, ಕುರಿಯ ತುಪ್ಪಳದಿಂದ ಮೀಸೆ ತಯಾರಿಸಿಕೊಂಡು ದಾರದಿಂದ ಕಟ್ಟಿಕೊಳ್ಳುತ್ತಿದ್ದರು. ತೆಳುವಾದ ತಗಡಿನಿಂದ, ಕೀರಿಟ, ಗಧೆ, ಭುಜ ಕೀರಿಟ ಮೊದಲಾದವುಗಳನ್ನು ಸ್ಟಿಲ್ ಮತ್ತು ತಗಡಿನಿಂದ ತಯಾರಿಸಿಕೊಳ್ಳುತ್ತಾರೆ.

### ಬೇಟೆ ಪರಿಕರಗಳ ತಯಾರಿಕೆ

ಹಗಲುವೇಷಗಾರರು ಬೇಟೆಗೆ ಬೇಕಾದ ಪರಿಕರಗಳನ್ನು ತಾವೇ ತಯಾರಿಸಿಕೊಳ್ಳುತಾರೆ. ಮೀನಿನ ಬಲೆ, ಕೌಜುಗ ಬಲೆ, ಮೊಲದ ಬಲೆ, ಅಳಿಲು ಇಡಿಯುವ ಬಲೆ, ಸಣ್ಣ ಸಣ್ಣ ಪ್ರಾಣಿಗಳನ್ನು ಇಡಿಯಲು ಬೋನುಗಳನ್ನು ಮೊದಲಾದವುಗಳನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ದೊಡ್ಡ ದೊಡ್ಡ ಬಲೆಗಳನ್ನು ವೈರಿನಿಂದ ಅಥವಾ ನಾರಿನಿಂದ ತಯಾರಿಸಿಕೊಳ್ಳುತ್ತಾರೆ. ಅಲ್ಲದೆ ಬೇರೆಯವರಿಗೆ ಹಣಕ್ಕೆ ಬಲೆಗಳನ್ನು ಮಾರಿಕೊಳ್ಳುತ್ತಾರೆ. ಈ ರೀತಿ ಹಗಲುವೇಷಗಾರರು ಮನೆಯಲ್ಲಿ ತಮ್ಮ ದಿನನಿತ್ಯದ ವ್ಯವಹಾರಗಳಿಗೆ ಬೇಕಾದ ಪರಿಕರಗಳನ್ನು ಸ್ವಯಂ ತಾವೇ ತಯಾರಿಸಿಕೊಳ್ಳುತ್ತಾರೆ.

### ವ್ಯಾಪಾರ

ಹಗಲುವೇಷಗಾರಿಕೆಯ ಜೊತೆ ಜೊತೆಗೆ ಬಂಡವಾಳವಿಲ್ಲದ ಹೊಸವೃತ್ತಿಗಳ ಕಡೆಗೂ ಗಮನ ಹರಿಸಿದ್ದಾರೆ. ಅಂತಹ ವೃತ್ತಿಗಳಲ್ಲಿ ವ್ಯಾಪಾರವು ಒಂದು. ಪ್ಲಾಸ್ಟಿಕ್ ಸಾಮಾಗ್ರಿಗಳು ಬೆಳ್ಳಿ ಮತ್ತು ಸ್ಟೀಲ್ ಪಾತ್ರೆಗಳ ಮಾರಾಟದಲ್ಲಿ ಅವರು ತೊಡಗಿಕೊಂಡಿದ್ದಾರೆ. ಇತ್ತೀಚೆಗೆ ಕೈಗಾರಿಕರಣ ಬೆಳೆದಂತೆಲ್ಲಾ ಹಲವಾರು ಚಿಕ್ಕಪುಟ್ಟ ಕೈಗಾರಿಕೆಗಳು ಹುಟ್ಟಿಕೊಳ್ಳುವುದರಿಂದ ಮಾರುಕಟ್ಟೆಯಲ್ಲಿ ಪೈಪೋಟಿ ಹೆಚ್ಚಾಗಿ ಕೈಗಾರಿಕಾ ಮಾಲಿಕರು ನಿರುದ್ಯೋಗಿಗಳಿಗೆ ಯಾವುದೇ ಬಂಡವಾಳವಿಲ್ಲದೆ ಸಾಮಾನುಗಳನ್ನು ಮಾರಾಟಕ್ಕೆ ಕೊಟ್ಟು, ನಂತರ ಮಾರಾಟವಾದ ಮೇಲೆ ಅವರ ಸ್ಥಳಗಳಿಗೆ ಇವರೇ ಹೋಗಿ ಹಣವನ್ನು ವಸೂಲಿ ಮಾಡಿಕೊಂಡು ಬರುವ ಪರಿಸ್ಥಿತಿ ನಿರ್ಮಾಣವಾಗಿದೆ. ಇಂತಹ ವ್ಯಾಪಾರವು ಹಗಲುವೇಷಗಾರರಿಗೆ ಹೆಚ್ಚು ಅನುಕೂಲಕರವಾಗಿದೆ. ಹಲವಾರು ಜನರು ಯಾರಾದರೂ ಪರಿಚಯವಿರುವವರನ್ನು ಕೈಗಾರಿಕಾ ಮಾಲಿಕರ

ಹತ್ತಿರ ಕರೆದುಕೊಂಡು ಹೋಗಿ ಅತ್ಯಂತ ಕಡಿಮೆ ಬೆಲೆಯ ಪ್ಲಾಸ್ಟಿಕ್ ಸಾಮಾನುಗಳನ್ನು ತೆಗೆದುಕೊಂಡು ಊರುಗಳಲ್ಲಿ ಪುಟ್ಟಿಗೆ ಅಥವಾ ಪ್ಲಾಸ್ಟಿಕ್ ಹಗ್ಗದಿಂದ ಹೆಣೆದ ಬುಟ್ಟಿಯಲ್ಲಿ ಹಾಕಿಕೊಂಡು ತಲೆಯ ಮೇಲೆ ಹೊತ್ತುಕೊಂಡು ಓಣಿ ಓಣಿಯಲ್ಲಿ ಕೂಗುತ್ತಾ ತಿರುಗಾಡುತ್ತಾರೆ. ಇವರು ಮೊದಲು ಸಾಮಾನು ಎಷ್ಟಕ್ಕೆ ಮಾರಾಟ ಮಾಡಬೇಕು ಎಂದುಕೊಂಡಿರುತ್ತಾರೆಯೋ ಅದರ ಎರಡು ಪಟ್ಟು ಬೆಲೆ ಹೆಚ್ಚಿಗೆ ಹೇಳುತ್ತಾರೆ. ಆಗ ಜನ ಅರ್ಧ ಬೆಲೆಗೆ ತೆಗೆದುಕೊಳ್ಳಲು ನಿರ್ಧರಿಸುತ್ತಾರೆ. ಇಂತಹ ವ್ಯಾಪಾರದಲ್ಲಿ ಅವರು ಹೆಚ್ಚಿನ ಲಾಭಗಳಿಸುವ ಉದ್ದೇಶ ಹೊಂದಿರುತ್ತಾರೆ. ಹೀಗೆ ಊರಿಂದ ಊರಿಗೆ ಅಲೆಯುತ್ತಾ ಪುಟ್ಟಿಯನ್ನು ಹೊತ್ತುಕೊಂಡು ವ್ಯಾಪಾರ ಮಾಡಿಕೊಂಡು ಬರುತ್ತಾರೆ. ಅದರಂತೆ ಹೆಣ್ಣು ಮಕ್ಕಳು ಛತ್ರಿ, ಶಾಲೆ ಮಕ್ಕಳಿಗೆ ಬೇಕಾಗುವ ಚೀಲಗಳು, ಪ್ಲಾಸ್ಟಿಕ್ ಸಾಮಾನುಗಳನ್ನು ಪುಟ್ಟಿಯಲ್ಲಿ ತುಂಬಿಕೊಂಡು ಓಣಿ ಓಣಿಯಲ್ಲಿ ತಿರುಗಾಡಿ ವ್ಯಾಪಾರ ಮಾಡಿಕೊಂಡು ಬರುತ್ತಾರೆ. ನಂತರ ನಗರದಲ್ಲಿ ಇವರಿಗೆ ವ್ಯಾಪಾರದ ಸಾಮಾಗ್ರಿಗಳನ್ನು ಕೊಟ್ಟ ವ್ಯಕ್ತಿಯು ಎರಡು ಅಥವಾ ನಾಲ್ಕು ದಿನಕ್ಕೆ ಅವರ ಗುಡಾರಗಳಿಗೆ ಹೋಗಿ ಹಣ ಸಂಗ್ರಹಿಸಿಕೊಂಡು ಬರುತ್ತಾನೆ. ಇಂತಹ ವ್ಯಾಪಾರದಿಂದ ಹಗಲುವೇಷಗಾರರು ಬಂಡವಾಳವಿಲ್ಲದೆ ಹಣ ಸಂಪಾದನೆ ಮಾಡುವ ವಿಧಾನವನ್ನು ಕಂಡುಕೊಂಡಂತಾಗಿದೆ. ಪ್ಲಾಸ್ಟಿಕ್ ವ್ಯಾಪಾರದಂತೆ ಸ್ಟೀಲ್ ಮತ್ತು ಸಿಲ್ವರ್ ಅಂಗಡಿಯವರಿಂದ ಉದ್ರಿ ಸಾಮಾನುಗಳನ್ನು ಖರೀದಿಸಿ ವ್ಯಾಪಾರ ಮಾಡಿ ತೀರಿಸುತ್ತಾರೆ. ಇದು ಕೂಡ ಇವರಿಗೆ ಲಾಭವನ್ನು ಕೊಡುವ ಉದ್ಯೋಗವಾಗಿದೆ. ಇದಲ್ಲದೆ ಗಂಡಸರು ಪಟ್ಟಣಗಳಿಂದ ಕಡಿಮೆ ಬೆಲೆಯ ಗಡಿಯಾರ, ಬ್ಯಾಟರಿ, ಗೋಡೆ ಗಡಿಯಾರ, ಲೆಕ್ಕ ಮಾಡುವ ಗಣಕಯಂತ್ರ ಮೊದಲಾದವುಗಳನ್ನು ಮಾರಾಟ ಮಾಡುವುದನ್ನು ಕಾಣಬಹುದು.

**ಅಡಿಟಿಪ್ಪಣಿ**

೧. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು.೭೧

೨. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಬುಡಕಟ್ಟು ಸಂ.೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦, ಪು.೬೩೬

೩. ರಮೇಶ ಸ.ಚಿ., 'ಶಿಕಾರಿ ಪರಂಪರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು.೧

೪. ರಮೇಶ ಸ.ಚಿ., 'ಬೇಟೆ: ಒಂದು ಸಾಂಸ್ಕೃತಿಕ ಪದಕೋಶ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೨

೫. ರಮೇಶ ಸ.ಚಿ., 'ಶಿಕಾರಿ ಪರಂಪರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩, ಪು.೧೪

೬. ಅದೇ ಪು.೧೪

೭. ಅದೇ ಪು.೧೪

೮. ಅದೇ ಪು.೧೫

೯. ಅದೇ ಪು.೧೩

೧೦. ರಮೇಶ ಸ.ಚಿ., 'ಬೇಟೆ: ಒಂದು ಸಾಂಸ್ಕೃತಿಕ ಪದಕೋಶ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧, ಪು.೧೪೭

೧೧. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು.೩೫

೧೨. ಅದೇ ಪು.೩೭

೧೩. 'The Wild Life Protection Act 1972', Natraj Publishers, Dehradun, Traffic India, 1994, page-23

೧೪. ರಮೇಶ ಸ.ಚಿ., 'ಶಿಕಾರಿ ಪರಂಪರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೬೦೦೩, ಪು.೭

೧೫. ಮೌಖಿಕ ಸಂದರ್ಶನ, ದಿನಾಂಕ ೧೮.೨.೦೪, ಶಿವಪ್ಪ, ವಯಸ್ಸು ೪೮, ಗಬ್ಬೂರು

೧೬. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು.೭೨

***

ಅಧ್ಯಾಯ ೫

# ಸಮಾರೋಪ

ಅಲೆಮಾರಿ ಸಮುದಾಯಕ್ಕೆ ಸೇರಿದ ಹಗಲುವೇಷಗಾರರು ಶ್ರೇಣಿಕೃತ ಸಮಾಜ ವ್ಯವಸ್ಥೆಯಲ್ಲಿ ದೂರಕ್ಕೆ ತಳ್ಳಲ್ಪಟ್ಟಂತೆ, ಚರಿತ್ರೆ ಬರವಣಿಗೆಯಲ್ಲೂ ನಿರ್ಲಕ್ಷ್ಯಕ್ಕೆ ಒಳಗಾಗಿದ್ದಾರೆ. ರಾಷ್ಟ್ರೀಯವಾದಿ ಮತ್ತು ಸಾಮ್ರಾಜ್ಯಶಾಹಿ ಚರಿತ್ರೆ ಬರವಣಿಗೆಗಳಲ್ಲಿ ಈ ಸಮುದಾಯ ಪ್ರವೇಶ ಪಡೆದುಕೊಂಡಿಲ್ಲ. ಈ ಪಂಥಗಳ ಉದ್ದೇಶವು ಅದಾಗಿರಲಿಲ್ಲ. ಈ ಎರಡು ಪಂಥಗಳು ಕಟ್ಟಿಕೊಡುವ ಚರಿತ್ರೆ ಶ್ರೀಮಂತ ವರ್ಗದ ಸಾಂಸ್ಕೃತಿಕ ರಾಜಕೀಯಕ್ಕೆ ಸಂಬಂಧಿಸಿದಾಗಿದ್ದು ವೈಭವೀಕರಣ ಇದರಲ್ಲಿ ಹಾಸುಹೊಕ್ಕಾಗಿದೆ. ಬುಡಕಟ್ಟು, ಆದಿವಾಸಿ, ಅಲೆಮಾರಿ ಸಮುದಾಯಗಳು ಚರಿತ್ರೆ ಅಧ್ಯಯನದ ವಸ್ತುಗಳಾಗಿರುವುದು ಅಲಕ್ಷಿತ ವರ್ಗದ ಚರಿತ್ರೆ ಬರವಣಿಗೆ ಆರಂಭಗೊಂಡ ಮೇಲೆ. ಸಬಾಲ್ಟರ್ನ್ ಪಂಥವು ಈ ನಿಟ್ಟಿನಲ್ಲಿ ಚರಿತ್ರೆ ಬರವಣಿಗೆಗೆ ಹೊಸ ಆಯಾಮವೊಂದನ್ನು ಒದಗಿಸಿಕೊಟ್ಟಿತು. ಅಲಕ್ಷಿತ ವರ್ಗಗಳ ಅಧ್ಯಯನಕ್ಕೆ ಇದೊಂದು ವೇದಿಕೆಯಾಯಿತು.

ಅಲೆಮಾರಿ ಸಮುದಾಯಗಳ ಅಧ್ಯಯನ ಕೈಗೊಂಡಾಗ ಎದುರಾಗುವ ಮುಖ್ಯ ಸಮಸ್ಯೆ ಎಂದರೆ ಅವರ ಮೂಲ ಮತ್ತು ವಲಸೆಗೆ ಸಂಬಂಧಿಸಿದ್ದು. ಹಗಲುವೇಷಗಾರರ ಮೂಲದ ಬಗ್ಗೆ ಲಭ್ಯವಿರುವ ಮಾಹಿತಿಗಳನ್ನು ಇಟ್ಟುಕೊಂಡು ಈ ನಿಬಂಧದಲ್ಲಿ ಚರ್ಚಿಸಲಾಗಿದೆ. ದೇವದುರ್ಗ ತಾಲೂಕಿನಲ್ಲಿ ಕಂಡುಬರುವ ಹಗಲುವೇಷಗಾರರು ಮೂಲತಃ ಆಂಧ್ರಪ್ರದೇಶಕ್ಕೆ ಸೇರಿದವರು ಎನ್ನುವದು ಹೆಚ್ಚು ಒಪ್ಪಿತವಾದ ಅಭಿಪ್ರಾಯ. ವಿವಿಧ ಅರಸುಮನೆತನಗಳ ಆಳ್ವಿಕೆಯ ಸಂದರ್ಭದಲ್ಲಿ ಈ ಸಮುದಾಯದ ಬದುಕು ಯಾವ ಸ್ವರೂಪದಾಗಿತ್ತು ಎನ್ನುವುದರ ಬಗ್ಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಇವರು ಅಲೆಮಾರಿಗಳಾಗಿರುವುದರಿಂದ ಹಾಗೂ ವಲಸೆ ಅವರ ಬದುಕಿನ ಪ್ರಮುಖ ವಿಚಾರವಾಗಿರುವುದರಿಂದ ಅವರನ್ನು ಯಾವುದೇ ಒಂದು ಪ್ರದೇಶದ ಪರಿಸರ, ಸಂಸ್ಕೃತಿಯ ಚೌಕಟ್ಟಿನಲ್ಲಿ ಇಟ್ಟು ನೋಡಲು ಸಾಧ್ಯವಾಗುವುದಿಲ್ಲ. ವೇಷಗಾರಿಕೆಯೊಂದನ್ನು ಬಿಟ್ಟು ಸ್ವಂತದ್ದು ಎನ್ನುವುದು ಯಾವುದು ಇಲ್ಲದ ಈ ಸಮುದಾಯ ಎಲ್ಲಾ ರೀತಿಯಿಂದಲೂ ಅಲಕ್ಷ್ಯಕ್ಕೆ ಒಳಗಾಗಿರುವಂತದ್ದು. ಹಾಗಾಗಿ ಇವರು ಯಾವ ಪ್ರದೇಶಕ್ಕೆ ವಲಸೆ ಹೋದರು ಜೀವನ ಮಟ್ಟದಲ್ಲಿ ಸುಧಾರಣೆ ಕಂಡುಬರಲು ಸಾಧ್ಯವಿಲ್ಲ. ಅಧಿಕಾರ, ಸವಲತ್ತುಗಳಿಂದ ವಂಚಿತರಾಗಿರುವುದರಿಂದ ಮೇಲುವರ್ಗದ ಯಜಮಾನಿಕೆಯನ್ನು ಅನುಭವಿಸುವುದು ಇವರಿಗೆ ಅನಿವಾರ್ಯವಾಯಿತು.

ಹಗಲುವೇಷಗಾರರ ಸಮಾಜ ಹಲವಾರು ವೈಶಿಷ್ಟ್ಯತೆಗಳಿಂದ ಕೂಡಿದ್ದಾಗಿದೆ. ಅವರ ಕುಟುಂಬ ವ್ಯವಸ್ಥೆ, ಜನನ-ಮರಣಕ್ಕೆ ಸಂಬಂಧಿಸಿದ ಆಚರಣೆಗಳು, ದೇವತಾರಾಧನೆ ಮುಂತಾದವು ಇತರ ಸಮುದಾಯಗಳಿಗಿಂತ ಭಿನ್ನವಾಗಿ ಕಂಡುಬರುತ್ತವೆ. ಮನೆಯ ಹಿರಿಯನ ಮೂಲಕವೇ ಎಲ್ಲಾ ಕೆಲಸ ಕಾರ್ಯಗಳು ನಡೆಯುವ ಈ ಸಮುದಾಯವು ಪಿತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಹೊಂದಿದೆ. ಈ ಸಮುದಾಯ ತನ್ನ ಜೀವನ ನಿರ್ವಹಣೆಗಾಗಿ ನಡೆಸುವ ವೇಷಗಾರಿಕಾ ವೃತ್ತಿಯಲ್ಲಿ ಪೌರಾಣಿಕ ಹಾಗೂ ಐತಿಹಾಸಿಕ ವಸ್ತುಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟಿದೆ. ತಮ್ಮ ಖಾಸಗಿ ವಿಚಾರ ಬಂದಾಗ ಗ್ರಾಮದೇವತೆಗಳು ಇಷ್ಟವಾಗುತ್ತವೆ. ತಮ್ಮ ಬದುಕಿಗೆ ಭದ್ರವಾದ ನೆಲೆಯೊಂದನ್ನು ಕಾಣದ ಈ ಸಮುದಾಯ ತಮ್ಮ ಕಲೆಯ ಪ್ರದರ್ಶನದ ಸಂದರ್ಭದಲ್ಲಿ ಇತರರಿಗೆ ಸುಖ ಶಾಂತಿಯನ್ನು ಹಾರೈಸುತ್ತದೆ.

ಹಗಲುವೇಷಗಾರರ ಆರ್ಥಿಕ ಬದುಕು ಅವಲಂಬಿತವಾಗಿರುವುದು ಅವರ ವೃತ್ತಿಯಲ್ಲಿ ವೇಷಗಾರಿಕೆಯನ್ನೇ ಪ್ರಧಾನ ವೃತ್ತಿಯನ್ನಾಗಿ ಇಟ್ಟುಕೊಂಡ ಈ ಸಮುದಾಯ ಪಶುಪಾಲನೆ, ಬೇಟೆ, ಭಿಕ್ಷಾಟನೆ ಮುಂತಾದ ಉಪವೃತ್ತಿಗಳಲ್ಲೂ ತೊಡಗಿಕೊಂಡಿದೆ. ಆದರೆ ಇವು ಯಾವುವು ಅವರ ಬದುಕಿಗೊಂದು ಸಮರ್ಥ ನೆಲೆಯನ್ನು ತಂದುಕೊಡುವಲ್ಲಿ ಯಶಸ್ವಿಯಾಗಲಿಲ್ಲ. ಆಧುನಿಕತೆಯ ಪ್ರವೇಶದಿಂದಾಗಿ ಆದ ಬದಲಾವಣೆಗಳು ಈ ಸಮುದಾಯದ ಪಾರಂಪರಿಕ ವೃತ್ತಿಗಳನ್ನು ಮೂಲೆಗುಂಪಾಗಿಸಿದವು. ಆಧುನಿಕತೆಯ ಜೊತೆಗೆ ಮುಖಾಮುಖಿಯಾಗಲು ಸಾಧ್ಯವಾಗದೆ ಹಾಗೂ ಪಾರಂಪರಿಕ ವೃತ್ತಿಗಳಲ್ಲಿ ಹೊಸತನವನ್ನು ಕಾಣಲಾಗದೆ ಅತಂತ್ರ ಸ್ಥಿತಿಯನ್ನು ಈ ಸಮುದಾಯ ಎದುರಿಸಿದೆ. ಕೃಷಿ, ಕೈಗಾರಿಕೆ, ಜ್ಞಾನ ಆಧಾರಿತ ವ್ಯವಸ್ಥೆಗಳಾವುದರಲ್ಲೂ ಇವರು ಗುರುತಿಸಿಕೊಂಡಿಲ್ಲ. ತಮ್ಮ ವೃತ್ತಿಗೆ ಪೂರಕವಾದ ಪರಿಕರಗಳನ್ನು ತಾವೆ ತಯಾರಿಸಿಕೊಳ್ಳುವ ಕುಶಲತೆ ಅವರಿಗೆ ಇದೆ. ವೇಷಗಾರಿಕೆ, ಭಿಕ್ಷಾಟನೆ, ಪಶುಪಾಲನೆ ಹಾಗೂ ಬೇಟೆ ಈ ವೃತ್ತಿಗಳು ಅವರ ಆರ್ಥಿಕಮಟ್ಟವನ್ನು ನಿರ್ಧರಿಸುವ ಅಂಶಗಳಾಗಿವೆ.

ಹಗಲುವೇಷಗಾರರು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಿಗಬೇಕಾದಂತ ಮೂಲಭೂತ ಸವಲತ್ತುಗಳಿಂದ ವಂಚಿತರಾಗಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಒಟ್ಟು ಸಾಮಾಜಿಕ ವ್ಯವಸ್ಥೆ ರಾಜಪ್ರಭುತ್ವದಿಂದ ಪ್ರಜಾಪ್ರಭುತ್ವ ವ್ಯವಸ್ಥೆಗೆ ಪರಿವರ್ತನೆ ಹೊಂದುವಾಗ ಬದಲಾವಣೆಗಳನ್ನು ಕಂಡಿದ್ದರೂ ಹಗಲುವೇಷಗಾರರ ದೃಷ್ಟಿಯಿಂದ ನೋಡಿದಾಗ ಯಾವ ಬದಲಾವಣೆಯೂ ಕಂಡು ಬರುವುದಿಲ್ಲ. ಇಂದಿಗೂ ಭೂಮಿಯ ಒಡೆತನವನ್ನು ಹೊಂದುವುದು ಅವರಿಗೆ ಸಾಧ್ಯವಾಗಲಿಲ್ಲ. ಜಾತಿ ಆಧಾರಿತ ಸಮಾಜಿಕ ವ್ಯವಸ್ಥೆ ಅದಕ್ಕೆ ಅವಕಾಶವನ್ನು ಮಾಡಿಕೊಡುವುದಿಲ್ಲ. ಈ ಸಮುದಾಯ ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಉನ್ನತಿಯನ್ನು ಹೊಂದಬೇಕಾದರೆ ಕೆಲವೊಂದು ಮೂಲಭೂತ ಸವಲತ್ತುಗಳನ್ನು ತನ್ನದಾಗಿಸಿಕೊಳ್ಳಬೇಕು. ಈ ಜನಾಂಗ ಮೂಲತಃ ಅಲೆಮಾರಿ ಜನಾಂಗವಾಗಿರುವುದರಿಂದ ಅಲೆಮಾರಿತನವನ್ನು ಬಿಟ್ಟು, ಒಂದು ದೇಶದಲ್ಲಿ ಸ್ಥಿರವಾಗಿ ನೆಲೆಸಿಂತಾಗ, ಸ್ವಂತ ಭೂಮಿಯನ್ನು ಹೊಂದಿದಾಗ ಮಾತ್ರ ಅಧಿಕಾರ ಮತ್ತು ಸವಲತ್ತುಗಳ ಬಗ್ಗೆ ಚಿಂತಿಸಲು ಸಾಧ್ಯ.

ಹಗಲುವೇಷಗಾರರು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಅಭಿವೃದ್ಧಿಯನ್ನು ಹೊಂದಬೇಕಾದರೆ ಈ ಕೆಳಕಂಡ ಮೂಲಭೂತ ಸೌಲಭ್ಯಗಳನ್ನು ಹೊಂದಬೇಕಾಗುತ್ತದೆ. ಅವುಗಳೆಂದರೆ, ಭೂಮಿಯ ಒಡೆತನ, ಖಾಯಂ ಆಗಿ ಒಂದು ಪ್ರದೇಶದಲ್ಲಿ ನೆಲೆಗೊಳ್ಳುವುದು, ಕಲೆಯ ಪ್ರದರ್ಶನವನ್ನು ಆಕರ್ಷಕಗೊಳಿಸುವುದು, ಶಿಕ್ಷಣವನ್ನು ಹೊಂದುವುದು ಹಾಗೂ ಸರಕಾರದ ಮೀಸಲಾತಿಯ ಸರಿಯಾದ ಬಳಕೆ. ಭೂಮಿಯ ಒಡೆತನವನ್ನು ಹೊಂದುವುದು ಈ ಸಮುದಾಯಕ್ಕೆ ಇಲ್ಲಿಯವರೆಗೆ ಸಾಧ್ಯವಾಗಲಿಲ್ಲ. ಇದರಿಂದಾಗಿ ಖಾಯಂ ಆಗಿ ಒಂದು ಪ್ರದೇಶದಲ್ಲಿ ನೆಲೆ ನಿಲ್ಲುವುದು ದೂರದ ಮಾತಾಗಿಯೇ ಉಳಿಯಿತು. ಆಧುನಿಕ ಮಾಧ್ಯಮಗಳು ಜಾಗತಿಕ ಮಟ್ಟದಲ್ಲಿ ತಮ್ಮ ಮೇಲ್ಮೆಯನ್ನು ಸಾಧಿಸುತ್ತಿರುವಾಗ ಈ ಸಂದರ್ಭದಲ್ಲಿ ವೇಷಗಾರಿಕಾ ವೃತ್ತಿ ಸಹಜವಾಗಿಯೇ ಆಕರ್ಷಕವಾಗಿ ಕಂಡುಬರುವುದಿಲ್ಲ. ಇದರರ್ಥ ವೇಷಗಾರಿಕಾ ವೃತ್ತಿಯನ್ನು ಆಕರ್ಷಕವನ್ನಾಗಿಸಲು ಸಾಧ್ಯವಿಲ್ಲ ಎಂದಲ್ಲ. ಈ ಸಮುದಾಯದ ಬಹುದೊಡ್ಡ ಸಮಸ್ಯೆ ಎಂದರೆ ಶಿಕ್ಷಣದಿಂದ ವಂಚಿತರಾಗಿರುವುದು. ಶಿಕ್ಷಣದ ಪ್ರಾಮುಖ್ಯತೆಯನ್ನು ಅರಿತುಕೊಂಡಾಗ ಮಾತ್ರ ತಮ್ಮ ದೃಷ್ಟಿಕೋನದಲ್ಲಿ ಬದಲಾವಣೆಗಳನ್ನು ಕಾಣಲು ಸಾಧ್ಯ. ಇದರಿಂದ ಹಗಲು ವೇಷಗಾರರು ತಮ್ಮದೇ ಆದ ಲೋಕ ದೃಷ್ಟಿಯೊಂದನ್ನು ಹೊಂದುವಂತಾಗುತ್ತದೆ. ಅವರ ಈಗಿರುವ ಲೋಕದೃಷ್ಟಿಯ ವ್ಯಾಪ್ತಿ ತುಂಬಾ ಕಿರಿದಾದದ್ದು. ಈ ವ್ಯಾಪ್ತಿಯೊಳಗೆ ಏನೇ ಪ್ರಯೋಗಗಳನ್ನು ಮಾಡಿದರು ಹೊಸದನ್ನು ಸಾಧಿಸಲು ಸಾಧ್ಯವಿಲ್ಲ, ಹಾಗೂ ಸರಕಾರದಿಂದ ದೊರೆಯಬಹುದಾದ ಸೌಲಭ್ಯಗಳ ಅರಿವನ್ನು ಹೊಂದಲು ಸಾಧ್ಯವಿಲ್ಲ.

ಸರಕಾರದ ಮೀಸಲಾತಿ ಪಟ್ಟಿಯಲ್ಲಿ ಹಗಲುವೇಷಗಾರರು ಬೇಡ ಜಂಗಮರಾಗಿ ಗುರುತಿಸಿಕೊಂಡಿದ್ದಾರೆ. ಈ ರೀತಿಯ ಗುರುತಿಸಿಕೊಳ್ಳುವಿಕೆ ಸರಕಾರದಿಂದ ಸವಲತ್ತುಗಳನ್ನು ಪಡೆಯಲು ಅನಿವಾರ್ಯವಾಗಿದೆ. ಸರಕಾರವು ಮೀಸಲಾತಿ ಪಟ್ಟಿಯಲ್ಲಿ ಈಗಿರುವ ಬೇಡ ಜಂಗಮ ಎನ್ನುವುದರ ಬದಲಾಗಿ ಬೇಡ ಜಂಗಾಲು ಅಥವಾ ಬುಡುಗ ಜಂಗಾಲು ಎನ್ನುವ ಪದವೇ ಹೆಚ್ಚು ಸೂಕ್ತವೆನ್ನುವುದು ಈ ಸಮುದಾಯದ ಜನರ ಅಭಿಪ್ರಾಯವಾಗಿದೆ. ಏಕೆಂದರೆ ಬೇಡ ಜಂಗಮ ಎಂಬುದಾಗಿ ಕರೆಸಿಕೊಂಡಾಗ ಮೀಸಲಾತಿಯ ಲಾಭವನ್ನು ಇನ್ನಿತರ ವರ್ಗಗಳು ಪಡೆಯುವ ಸಾಧ್ಯತೆಗಳು ಇವೆ. ಸರಕಾರದಿಂದ ಮೀಸಲಾತಿಯ ಮೂಲಕ ಕೆಲವೊಂದು ಸವಲತ್ತುಗಳನ್ನು ಪಡೆಯುವಷ್ಟೇ ಮುಖ್ಯವಾದದ್ದು, ಸಮಾಜ ಈ ಸಮುದಾಯವನ್ನು ನೋಡುವ ಬಗೆ. ಹೊಸ ಸವಲತ್ತುಗಳು ಬಂದಾಗ ಆರ್ಥಿಕ ಮಟ್ಟ ಸುಧಾರಿಸಬಹುದೇ ವಿನಃ ಸಾಮಾಜಿಕ ಸ್ಥಾನಮಾನವಲ್ಲ. ಜಾತಿ ಬಿಗಿ ಹಿಡಿತದಲ್ಲಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಇಂತಹ ಸಮುದಾಯಗಳು ಗೌರವಯುತವಾಗಿ ಬದುಕುವುದು ಕಷ್ಟಸಾಧ್ಯ. ಸರಕಾರ ಮೀಸಲಾತಿಯ ಮೂಲಕ ಸವಲತ್ತುಗಳನ್ನು ಸರಿಯಾದ ರೀತಿಯಲ್ಲಿ ಒದಗಿಸಿಕೊಟ್ಟಾಗ ಹಾಗು ಸಮಾಜ ಇವರ ಕಲೆಯನ್ನು ಗೌರವಿಸುವ, ಪ್ರೋತ್ಸಾಹಿಸುವ ಪ್ರವೃತ್ತಿಯನ್ನು ಬೆಳೆಸಿಕೊಂಡಾಗ ಮಾತ್ರ ಹಗಲುವೇಷಗಾರರು [illegible] [illegible] ಸಾಧ್ಯ.

***

# ಆಧಾರ ಗ್ರಂಥಗಳು


೧. ಅಂಜನಪ್ಪ ಯಳನಾಡು, 'ಹಗಲುವೇಷದವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩

೨. ಅರ್ರ್ವಿಯಸ್ ಸುಂದರಂ ಅನು: 'ಆಂಧ್ರಪ್ರದೇಶದ ಜಾನಪದ', ನ್ಯಾಷನಲ್ ಬುಕ್ ಟ್ರಸ್ಟ್, ನವದೆಹಲಿ, ೧೯೭೮

೩. ಕಟ್ಟಿ ಎ.ಆರ್., 'ಸಮಾಜಶಾಸ್ತ್ರದ ಮೂಲತತ್ವಗಳು ಮತ್ತು ಸಾಮಾಜಿಕ ಚಿಂತನೆ', ಪ್ರಕಾಶನ, ಗದಗ, ೧೯೮೯

೪. ಕರೀಗೌಡ ಬೀಚನಹಳ್ಳಿ, ಸಂ: 'ಕರಕುಶಲ ಕಲೆಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೫. ಕಾಳೆಗೌಡ ನಾಗವಾರ, ಹುಚ್ಚಪ್ಪ ಮಾಸ್ತರ್ ಎಸ್., ಸಂ: 'ಗಿರಿಜನ ಸಂಸ್ಕೃತಿ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

೬. ಕೂಸಣ್ಣ ದಾಸನೂರು, 'ಶೋಷಿತ ಜಂಗಮರ ಮೀಸಲಾತಿ', ಮಾತಂಗ ಪ್ರಕಾಶನ, ಮೈಸೂರು, ೧೯೯೯

೭. ಖಂಡೋಬಾ ಪಿ.ಕೆ., 'ಗಿರಿಜನ ಸಿರಿ', ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೩

೮. ಖಂಡೋಬಾ ಪಿ.ಕೆ., 'ಕರ್ನಾಟಕದ ಲಂಬಾಣಿಗಳು:ಒಂದು ಸಾಂಸ್ಕೃತಿಕ ಅಧ್ಯಯನ', ತೇಜ್‌ಸಿಂಗ್ ರಾಠೋಡ್ ಮೆಮೋರಿಯಲ್ ಟ್ರಸ್ಟ್, ಗುಲಬರ್ಗಾ, ೧೯೯೧

೯. ಗಂಗಾಧರ ದೈವಜ್ಞ, 'ಬುಡುಗ ಜಂಗಾಲರು', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೧

೧೦. ಗಣೇಶ್ ಮೊಗಳ್ಳಿ, 'ದಲಿತರು ಮತ್ತು ಜಾಗತೀಕರಣ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೯

೧೧. [illegible] ಬೆಂಗಳೂರು, ೧೯೭೭

೧೨. ಚಂದ್ರಶೇಖರ ಹೆಚ್, ಸಂ: 'ಸಿರಿದುರ್ಗ', ತಾಲೂಕ ಸಾಹಿತ್ಯ ಪರಿಷತ್ತು, ದೇವದುರ್ಗ, ೨೦೦೩

೧೩. ಚಿದಾನಂದ ಮೂರ್ತಿ ಎಂ., 'ಜನ - ಜನಪದ - ಜಾನಪದ', ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೧೪. ನರಸಿಂಹಚಾರ್ ಡಿ.ಎಲ್., ಸಂ: 'ವಡ್ಡಾರಾಧನೆ', ಶಾರದ ಮಂದಿರ, ಮೈಸೂರು, ೧೯೭೦

೧೫. ಪ್ರಭಾಕರ ಎ.ಎಸ್., 'ಬುಡಕಟ್ಟು ಬದುಕಿನ ಸ್ಥಿತ್ಯಂತರಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೧೬. ಪೋತೆ ಹೆಚ್.ಟಿ., 'ಜಾನಪದ ಸಿರಿ', ಕುಮಾರ ಪೂರ್ಣಿಮಾ ಪ್ರಕಾಶನ, ರಾಯಚೂರು, ೨೦೦೩

೧೭. ಪೋತೆ ಹೆಚ್.ಟಿ., 'ಹೈದರಾಬಾದ್-ಕರ್ನಾಟಕದ ಜನಪದ ಪ್ರದರ್ಶನ ಕಲೆಗಳು', ಅಂಬು ಪ್ರಕಾಶನ, ರಾಯಚೂರು, ೨೦೦೦

೧೮. ಬಸವರಾಜ ಎಚ್.ಎಂ., 'ಗುಡೇಕೋಟೆ: ಒಂದು ಚಾರಿತ್ರಿಕ ಅಧ್ಯಯನ', ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೯. ಬಸವರಾಜ ಮಲಶೆಟ್ಟಿ, 'ಉತ್ತರ ಕರ್ನಾಟಕದ ಬಯಲಾಟಗಳು', ಧಾರವಾಡ ವಿಶ್ವವಿದ್ಯಾಲಯ, ೧೯೮೩

೨೦. ಭಾಸ್ಕರ ಜಿ.ಎಂ., 'ಸುಡಗಾಡ ಸಿದ್ಧರು:ಒಂದು ಅಧ್ಯಯನ', ಮರುಗ ಪ್ರಕಾಶನ, ಗುಲಬರ್ಗಾ, ೨೦೦೦

೨೧. ಬೋರಲಿಂಗಯ್ಯ ಹಿ.ಚಿ., ಸಂ: 'ಬುಡಕಟ್ಟು ಅಧ್ಯಯನ ಸಂ-I', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨೨. ಬೋರಲಿಂಗಯ್ಯ ಹಿ.ಚಿ., ಸಂ: 'ಕರ್ನಾಟಕ ಜಾನಪದ ಕಲೆಗಳ ಕೋಶ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೬

೨೩. ಮರಿಯಪ್ಪ ಭಟ್, ಪ್ರಧಾನ ಸಂಪಾದಕರು, ಪ್ರೊ. ವೆಂಕಟಸುಬ್ಬಯ್ಯ ಜಿ., 'ಸಂಕ್ಷಿಪ್ತ ಕನ್ನಡ ನಿಘಂಟು', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೫

೨೪. ಮುನಿಶಾಮಪ್ಪ ಹೊಸೂರು, 'ನಟುವವರ ಸಂಸ್ಕೃತಿ', ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೮

೨೫. ಮೈತ್ರಿ ಬಿ.ಎಂ., 'ಬುಡಕಟ್ಟು [illegible]', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೬. ರಮೇಶ ಸ.ಚಿ., 'ಶಿಕಾರಿ ಪರಂಪರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨೭. ರಮೇಶ ಸ.ಚಿ., 'ಬೇಟೆ: ಒಂದು ಸಾಂಸ್ಕೃತಿಕ ಪದಕೋಶ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೨೮. ರಾಜಕುಮಾರ ಕೆ.ಆರ್.ಜೆ., 'ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು : ಚಾರಿತ್ರಿಕ ಅಧ್ಯಯನ', ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೯. ಲಕ್ಕಪ್ಪಗೌಡ ಜೆ.ಎಚ್., ಸಂ: 'ಕರ್ನಾಟಕ ಬುಡಕಟ್ಟು, ಸಂ-II', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ೨೦೦೦

೩೦. ವಿಜಯ ತಂಬಂಡ್ ಪೂಣಚ್ಚ, ಸಂ: ಕನ್ನಡ ವಿಶ್ವವಿದ್ಯಾಲಯ 'ವಿಶ್ವಕೋಶ-ಚರಿತ್ರೆ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೩೧. ವಿದ್ಯಾಶಂಕರ್ ಎಸ್., 'ಅಂಬಿಗರ ಚೌಡಯ್ಯನ ವಚನಗಳು', ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೨

೩೨. ವೆಂಕನಗೌಡ, 'ಬಳ್ಳಾರಿ ಮತ್ತು ಆಂಧ್ರಗಡಿಭಾಗದ ಹಗಲುವೇಷಗಾರರು', ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೩೩. ಶಾಮಶಾಸ್ತ್ರಿ, 'ನಯಸೇನನ ಧರ್ಮಾಮೃತಂ', ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೯೬

೩೪. ಶೀಲಕಾಂತ್ ಪತ್ತಾರ್, 'ಬಾದಾಮಿ : ಒಂದು ಸಾಂಸ್ಕೃತಿಕ ಅಧ್ಯಯನ', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೫. ಸೀತಾರಾಮಯ್ಯ ಎಂ.ವಿ., 'ಕವಿರಾಜ ಮಾರ್ಗ', ಕರ್ನಾಟಕ ಸಂಘ, ಸಹಕಾರಿ ಸೈನ್ಸ್ ಮತ್ತು ಆರ್ಟ್ಸ್ ಕಾಲೇಜ್, ಬೆಂಗಳೂರು, ೧೯೬೮

೩೬. ಸುಂಕಾಪುರ ಎಂ.ಎಸ್., ಸಂ: ಲೇ: ಎಂ.ಎಂ. ಕಲಬುರ್ಗಿ, 'ಜನಪದ ಸಾಹಿತ್ಯ ದರ್ಶನ ಭಾಗ-೬', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೧

೩೭. ಸುಜಾತ ಮಲ್ಲನಗೌಡ, 'ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೋಟೆಗಳು', ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೩೮. ಹಳ್ಳಿಕಟ್ಟೆ, ಫ.ಗು., ಸಂ: 'ಹರಿಹರನ ರಗಳೆಗಳು', ಸಮಾಜ ಪುಸ್ತಕಾಲಯ, ಧಾರವಾಡ, ೧೯೯೩

೩೯. ಹಿರೇಮಠ ಆರ್.ಸಿ., ಸಂ: '[illegible]', [illegible], ೧೯೭೪

೪೦. ಹಿರೇಮಠ ಬಿ.ಆರ್., ಸಂ: 'ಸಂಕೀರ್ಣ ವಚನ ಸಂಪುಟ-೩', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೧೯೯೩

೪೧. ಹಿರೇಮಠ ಆರ್.ಸಿ., ಸಂ: 'ಚೆನ್ನಬಸವಣ್ಣನ ವಚನಗಳು', ಕನ್ನಡ ಅಧ್ಯಯನ ಸಂಸ್ಥೆ, ಧಾರವಾಡ, ೧೯೯೪

೪೨. ಹಿರೇಮಠ ಬಿ.ಆರ್., ಸಂ: 'ಚೌಡಯ್ಯನ ವಚನ ಸಂಕೀರ್ಣ-೩', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೪೩. Edgarthrston, 'Castes and Tribes of Southern India', Asian Educational Services New Delhi, 1987.

೪೪. Kittle F.(RVV), 'Kannada-English Dictionary', Asian Educational Services New Delhi, 1894.

೪೫. Mythri K.M., 'Budga Jangam, Survery of Karnataka Preliminary, Date of Budge Jungama', Project Report, Kannada University, 2001

೪೬. Nanjudaih H.V., Ananthkrishan Ayer K.L., 'The Mysore Tribes and Castes', Mittal Publications, New Delhi, 1988

೪೭. Ranajit Guha, Ed: 'Subaltern Studies', vol-I,VI, Oxford University Press, Oxford, New York

೪೮. Suryanath V. Kamath, Ed: 'Gazetter of India', Government of Karnataka, (Belgaum District) 1987

೪೯. Singh K.S., 'The Scheduled Castes', Oxford University, Delhi, 1993

೫೦. Majumdar C., 'Ancient India', Motilal, Delhi, 1952

೫೧. Sherring M.A., 'Hindu Tribes and Castes', Cosmo, Delhi, 1979

೫೨. Sharma C.H., 'Social Mobillity among Scheduled Castes', MD Publications, Delhi, 1996

೫೩. Havanur L.G., 'Karnataka Backward Classes Commission Report', 1975

**ನಿಯತಕಾಲಿಕೆಗಳು**

೧. ರಂಗಣ್ಣ ಪಾಟೀಲ್ ಅಳ್ಳುಂಡಿ, 'ಕಾಯಕ ಬಿಡದ ವೇಷಧಾರಿಗಳು, ಆಶ್ರಯವಿಲ್ಲದ ಅಲೆಮಾರಿಗಳು', ದಿನಾಂಕ ೧.೧೨.೦೨, ರಾಯಚೂರುವಾಣಿ.

೨. ಗೌರೀಶಮಠ ವರದಿ, 'ಬಹುರೂಪಿ ವೇಷಗಾರರು', ದಿನಾಂಕ ೬.೮.೦೨, ಸುದ್ದಿ ಮೂಲ.

೩. ಬಸವರಾಜ ರಾಮಪ್ಪ ಹುಳಕಣ್ಣವರ ವರದಿ 'ಕೊಪ್ಪಳದಲ್ಲೊಬ್ಬ ವೇಷಧಾರಿ ಬಾಲ ಭಿಕ್ಷುಕ', ದಿನಾಂಕ ೨೩.೧೨.೦೩, ಸಂಯುಕ್ತ ಕರ್ನಾಟಕ, ವಿಶೇಷ ಪುರವಣಿ.

೪. ಬಸವಗೌಡ ದೇಸಾಯಿ ವರದಿ, 'ನೇಪಥ್ಯಕ್ಕೆ ಸರಿಯುತ್ತಿರುವ ಪುರಾತನ ಹಗಲುವೇಷಧಾರಿ ಕಲೆ', ದಿನಾಂಕ ೯.೧೨.೦೨, ಸಂಯುಕ್ತ ಕರ್ನಾಟಕದ ಹೈದ್ರಾಬಾದ್ ವಿಶೇಷ ಪುರವಣಿ.

೫. ಸಂಪಾದಕೀಯ, 'ಬಣ್ಣ ಬಳಿಯುವುದು ದಿಟ, ಯಾರಿಗೂ ಗೊತ್ತಿಲ್ಲ ತುತ್ತಿನ ಚೀಲದ ಸಂಕಟ', ದಿನಾಂಕ ೧೦.೬.೦೩, ಪ್ರಜಾವಾಣಿ, ಪ್ರಾದೇಶಿಕ ಸುದ್ದಿ.

***



೧. ತಮ್ಮ ವಸತಿಯೊಂದಿಗೆ ಹಗಲುವೇಷಗಾರರು



೨. ಜಟಾಸುರನ ಸನ್ನಿವೇಶದಲ್ಲಿ ಕಲಾವಿದರ ಸಂಘರ್ಷದ ನೋಟ



೩. ಭಸ್ಮಾಸುರನ ಸನ್ನಿವೇಶದಲ್ಲಿ ವೇಷಗಾರ ಕಲಾವಿದರ ತಂಡ



೪. ಸುಂದೆ - ಉಪಸುಂದರೆನ ಸನ್ನಿವೇಶದಲ್ಲಿ ಕಲಾವಿದರಾದ ಜಂಬಣ್ಣ ಮತ್ತು ಗೋಪಾಲ

